# ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟಜಾತಿಯ ಮಹಿಳಾ ವಿದ್ಯಾರ್ಥಿನಿಯರು : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ
ಸಂಶೋಧನಾ ಸಂಪ್ರಬಂಧ




ಭಾಷಾ ನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ-೫೮೩೨೭೬



2009

# ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟಜಾತಿಯ ಮಹಿಳಾ ವಿದ್ಯಾರ್ಥಿನಿಯರು : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್. ಪದವಿಗಾಗಿ ಸಾದರ ಪಡಿಸಿದ
ಸಂಶೋಧನಾ ಸಂಪ್ರಬಂಧ









ಭಾಷಾ ನಿಕಾಯ

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ-೫೮೩೨೭೬

2009

# ವಿಷಯಾನುಕ್ರಮಣಿಕೆ

# ಅಧ್ಯಾಯ-1

# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಮತ್ತು ವೈಧಾನಿಕತೆ

# ಅಧ್ಯಾಯ - 1

## ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ವೈಧಾನಿಕತೆ

### 1.1 ಪ್ರಸ್ತಾವನೆ :

ಭಾರತವು ಜಾತಿ ಸಮೂಹ, ಮತೀಯ ಹಾಗೂ ಭಾಷಾ ಸಮೂಹಗಳಿಂದ ಕೂಡಿರುವ ಒಂದು ವಿಶಿಷ್ಟವಾದ ದೇಶ. ಜಾತಿ ವ್ಯವಸ್ಥೆಯು ಭಾರತದ ಸ್ತರವಿನ್ಯಾಸದ ಪ್ರಮುಖ ರೂಪವಾಗಿರುತ್ತದೆ. ಭಾರತೀಯ ಸಮಾಜದ ಅತ್ಯಂತ ಕೆಳಸ್ತರದಲ್ಲಿರುವ ಎರಡು ಪ್ರಮುಖ ವರ್ಗಗಳೆಂದರೆ

1. ಪರಿಶಿಷ್ಟ ಜಾತಿ
2. ಪರಿಶಿಷ್ಟ ಪಂಗಡ

ಜಾತಿಯ ಶ್ರೇಣಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳು ಎದುರಿಸುತ್ತಿರುವ ಸಮಸ್ಯೆಯೆಂದರೆ ಅಸ್ಪೃಶ್ಯತೆ. ಸಮಾಜದಲ್ಲಿ ಹಲವು ಬಗೆಯ ಅನರ್ಹತೆಗಳಿಗೆ ಒಳಗಾಗಿರುವ ಜಾತಿಗಳನ್ನು ಕಾನೂನಿನ ಪರಿಭಾಷೆಯಲ್ಲಿ ಪರಿಶಿಷ್ಟ ಜಾತಿ ಎಂದು ಕರೆಯಲಾಗಿದೆ.

ಪರಿಶಿಷ್ಟ ಜಾತಿ ಮತ್ತು ಪಂಗಡ ಎಂಬ ಪದವನ್ನು ಮೊಟ್ಟಮೊದಲ ಬಾರಿಗೆ ಪರಿಚಯಿಸಿದವರು ಬ್ರಿಟೀಷರು. 1928ರ ಸೈಮನ್ ಆಯೋಗ 1935ರ ಭಾಸತ ಸರ್ಕಾರದ ಕಾಯ್ದೆಯು ಷೆಡ್ಯೂಲ್ ಎಂಬ ಆಂಗ್ಲ ಪದದಿಂದ 'ಷೆಡ್ಯೂಲ್‌ಕಾಸ್ಟ್' ಎಂದೂ, 'ಟ್ರೈಬ್ಸ್' ಎಂಬ ಇಂಗ್ಲೀಷ್ ಶಬ್ಧವು ಲ್ಯಾಟಿನ್ ಭಾಷೆಯ 'ಟ್ರೈಬಸ್' ಎಂಬ ಮೂಲ ಪದದಿಂದ ಬಂದಿದೆ.[1]

ಅಸ್ಪೃಶ್ಯರನ್ನು 'ಹರಿಜನ' ರೆಂದು ಕರೆಯುವ ಪ್ರಯತ್ನ ನಡೆದಿದ್ದು ಪರಿಶಿಷ್ಟ ಜಾತಿಗಳಿಗೆ ಸೇರಿದವರೆಂದು ಗುರುತಿಸಲ್ಪಡುವ, ಅಸ್ಪೃಶ್ಯತೆಯ ಶೋಷಣೆಗೆ ಹಾಗೂ ತುಳಿತಕ್ಕೆ ಒಳಗಾಗಿರುವುದನ್ನು ದೇಶದಾದ್ಯಂತ ಬೇರೆ ಬೇರೆ ಹೆಸರುಗಳಲ್ಲಿ ಕರೆಯುವುದುಂಟು. ಗಾಂಧೀಜಿಯವರು ಇವರನ್ನು 'ಹರಿಜನರು- ಗಿರಿಜನರು' ಎಂದು ಕರೆದರು. ದೇಶದಾದ್ಯಂತ ಈ ಶಬ್ಧವು ಇಂದಿಗೂ ಬಳಕೆಯಲ್ಲಿದೆ. ಪರಿಶಿಷ್ಟ ಜಾತಿಯವರನ್ನು ಮಹಾರಾಷ್ಟ್ರದಲ್ಲಿ ಮಹರ್, ಚಾಂಡಾಲರು, ತಮಿಳುನಾಡಿನಲ್ಲಿ ಶಾನರ್,

ಕೇರಳದಲ್ಲಿ ಪುಲಯನ್, ತೀಯಾನ್ ಪಂಜಾಬಿನಲ್ಲಿ ಜಾಡಮಾಲಿ ಎಂದೂ ಕರೆಯಲಾಗುತ್ತದೆ. ಪರಿಶಿಷ್ಟ ಪಂಗಡದವರನ್ನು ಆದಿವಾಸಿಗಳು, ಅರಣ್ಯ ವಾಸಿಗಳು, ಗುಡ್ಡಗಾಡು ಜನರು, ಗಿರಿಜನರು ಮೊದಲಾದ ಹೆಸರುಗಳಿಂದ ಕರೆಯಲಾಗುತ್ತದೆ.

ಗಾಂಧೀಜಿಯವರು ಅಸ್ಪೃಶ್ಯತೆ ಎಂಬುದು ಹುಟ್ಟಿನ ಕಾರಣ ಎನ್ನಬಹುದಾದ ಅಭಿಪ್ರಾಯವನ್ನು ಸೂಚಿಸುತ್ತಾರೆ. ಅಂದರೆ 'ಒಂದು ನಿರ್ದಿಷ್ಟ ಸ್ಥಿತಿಯಲ್ಲಿ ಅಥವಾ ಕುಟುಂಬದಲ್ಲಿ ಹುಟ್ಟಿದ ಕಾರಣದಿಂದಾಗಿ ಕೆಲವು ವ್ಯಕ್ತಿಗಳು ಮುಟ್ಟುವುದರಿಂದುಂಟಾಗುವ ಮಾಲಿನ್ಯ' ಎಂದಿದ್ದಾರೆ.[2]

ಡಾ|| ಡಿ.ಎನ್. ಮಜುಮ್‌ದಾರ್‌ರವರ ಪ್ರಕಾರ 'ಮೇಲ್ಜಾತಿಯವರಿಂದ ಪರಂಪರಾಗತವಾಗಿ ವಿಧಿಸಲ್ಪಟ್ಟ ಮತ್ತು ಸಾಮಾಜಿಕವಾಗಿ ಹೇರಲ್ಪಟ್ಟ ವಿವಿಧ ಸಾಮಾಜಿಕ ಮತ್ತು ರಾಜಕೀಯ ಅನರ್ಹತೆಗಳಿಂದ ನರಳುತ್ತಿರುವ ಜಾತಿಗಳನ್ನು ಅಸ್ಪೃಶ್ಯಜಾತಿ'' ಗಳೆಂದು ಕರೆದಿದ್ದಾರೆ.3

ಪರಿಶಿಷ್ಟಜಾತಿ ಮತ್ತು ಪಂಗಡದವರು ಶತಮಾನಗಳಿಂದಲೂ ಅನುಭವಿಸುತ್ತಾ ಬಂದಿರುವ ಸಮಸ್ಯೆಗಳೆಂದರೆ ಸಾಮಾಜಿಕ ಸಮಸ್ಯೆ, ಆರ್ಥಿಕ, ರಾಜಕೀಯ, ಧಾರ್ಮಿಕ ಮತ್ತು ಶೈಕ್ಷಣಿಕ ಸಮಸ್ಯೆಗಳಾಗಿದೆ. ಇವರ ಸಂಖ್ಯಾ ಬಲವುದೇಶದ ಒಟ್ಟು ಜನಸಂಖ್ಯೆಯಂತೆ ಹೆಚ್ಚುತ್ತಲೇ ಬಂದಿದೆ. ೧೯೯೧ರ ಜನಗಣತಿಯಂತೆ ಇವರ ಸಂಖ್ಯೆ ೧೪೦ ದಶಲಕ್ಷದಷ್ಟಿದೆ.

ಚಾರಿತ್ರಿಕವಾಗಿ ಪರಿಶಿಷ್ಟ ಜಾತಿ ಮತು ಪಂಗಡಗಳು ಅನೇಕ ದೌರ್ಜನ್ಯಗಳಿಗೆ ಒಳಗಾಗಿದ್ದು ಇವರುರಾಜ್ಯಾದ್ಯಂತ ಹರಡಿಕೊಂಡಿದ್ದಾರೆ. ೧೯೯೧ರ ಜನಗಣತಿಯಂತೆ ಪರಿಶಿಷ್ಟಜಾತಿ ಈ ರೀತಿಯಾಗಿ ಹಂಚಿಕೆಯಾಗಿದ್ದಾರೆ.

# 1990-91ರ ಜನಸಂಖ್ಯೆ ವರದಿ

| ಕ್ರ.ಸಂ. | ರಾಜ್ಯಗಳು | ಒಟ್ಟು ಜನಸಂಖ್ಯೆ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ |
|---|---|---|---|---|
| 1 | ಆಂಧ್ರಪ್ರದೇಶ | 66508008 | 10592066 | 4199481 |
| 2. | ಅರುಣಾಚಲಪ್ರದೇಶ | 864558 | 4052 | 550351 |
| 3. | ಅಸ್ಸಾಂ | 22414322 | 1659412 | 287441 |
| 4. | ಬಿಹಾರ್ | 86374465 | 12571700 | 6616914 |
| 5. | ಗೋವಾ | 1169793 | 24364 | 376 |
| 6. | ಗುಜರಾತ್ | 41309782 | 3060358 | 6161775 |
| 7. | ಹರಿಯಾಣ | 16463648 | 3250933 | --- |
| 8. | ಹಿಮಾಚಲಪ್ರದೇಶ | 5170877 | 1310296 | 128349 |
| 9. | ಜಮ್ಮು ಮತ್ತು ಕಾಶ್ಮೀರ | 5170877 | 1310296 | 218349 |
| 10. | ಕರ್ನಾಟಕ | 44977201 | 7369279 | 1995691 |
| 11. | ಕೇರಳ | 29098518 | 2886522 | 320967 |
| 12. | ಮಧ್ಯಪ್ರದೇಶ | 66181170 | 9626679 | 15399034 |
| 13. | ಮಹಾರಾಷ್ಟ್ರ | 78937187 | 8757842 | 7318281 |
| 14. | ಮಣಿಪುರ | 1837149 | 37105 | 362173 |
| 15. | ಮೇಘಾಲಯ | 1774778 | 9072 | 1517927 |
| 16. | ಮಿಜೋರಾಂ | 689756 | 691 | 1553565 |
| 17. | ನಾಗಲ್ಯಾಂಡ್ | 1205946 | --- | 1060822 |
| 18. | ಒರಿಸ್ಸಾ | 31659736 | 5129314 | 7032214 |
| 19. | ಪಂಜಾಬ್ | 20281969 | 5742528 | ---- |
| 20. | ರಾಜಸ್ಥಾನ್ | 44085990 | 7607820 | 5474881 |
| 21 | ಸಿಕ್ಕಿಂ | 406457 | 24084 | 90901 |
| 23. | ತಮಿಳುನಾಡು | 55858946 | 10712266 | 574194 |
| 23. | ತ್ರಿಪುರ | 2757205 | 41451116 | 853345 |
| 24. | ಉತ್ತರಪ್ರದೇಶ | 139112287 | 29276455 | 287901 |
| 25. | ಪಶ್ಚಿಮಬಂಗಾಳ | 680779965 | 16080611 | 3808760 |

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಏಳಿಗೆಗಾಗಿ ಶ್ರಮಿಸಿದ ನಾಯಕರಲ್ಲಿ ಕೆಳಜಾತಿಯವರೇ ಆದ ಅಂಬೇಡ್ಕರ್‌ರವರ ಪಾತ್ರ ಅತ್ಯಂತ ಪ್ರಮುಖವಾದುದು. ಅಂಬೇಡ್ಕರ್‌ರವರು ತುಳಿತಕ್ಕೊಳಗಾಗಿದ್ದ ಕೆಳಜಾತಿಯ ಜನರ ಏಳಿಗೆಗಾಗಿ ತಮ್ಮ ಜೀವನದ ಕೊನೆಯವರೆವಿಗೂ ಹೋರಾಡಿದರು. ಪರಿಶಿಷ್ಟ ಜಾತಿ ಮತ್ತು ಪಂಗಡದವರು ಎಲ್ಲಾ ಕ್ಷೇತ್ರಗಳಲ್ಲಿಯೂ ಹಿಂದುಳಿದಿದ್ದು, ಅನೇಕ ದೌರ್ಬಲ್ಯಗಳಿಗೆ ಒಳಗಾಗಿದ್ದಾರೆ. ಇವರ ಅಸಂಖ್ಯಾತ ಸಮಸ್ಯೆಗಳ ನಿವಾರಣೆಗೆ ಕೆಳಜಾತಿಯವರು ವಿದ್ಯಾವಂತರಾಗುವುದು ಅವಶ್ಯಕವೆಂದು ಸಾರಿದರು.

ಡಾ. ಅಂಬೇಡ್ಕರ್, ಜೋಗೇಂದ್ರನಾಥ್ ಮಂಡಲ್ ಮೊದಲಾದ ಹರಿಜನ ನೇತಾರರು ಶತಮಾನಗಳಿಂದ ಆಚರಣೆಯಲ್ಲಿರುವ ಅಸ್ಪೃಶ್ಯತೆಯನ್ನು ತೊಡೆದು ಹಾಕಿ, ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಮಾನತೆಯನ್ನು ನೀಡುವುದಾಗಿದ್ದು, ಈ ಉದ್ದೇಶ ಸಾಧನೆಗೆ ಶಿಕ್ಷಣವೇ ಕಾರಣ. ಆದ್ದರಿಂದ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಶಿಕ್ಷಣದ ಅರಿವು ಮೂಡಿಸಲು ಮುನ್ನಡೆದರು.

1918ರಲ್ಲಿ ಮಾರ್ಚಿನಲ್ಲಿ ಬರೋಡದ ಮಹಾರಾಜರ ಅಧ್ಯಕ್ಷತೆಯಲ್ಲಿ ವಿಠಲಬಾಯಿ ಪಟೇಲ್, ಎಂ.ಆರ್. ಜಯಕರ್, ಬಿಪಿನ್‌ಚಂದ್ರಪಾಲ್, ಬಾಲ ಗಂಗಾಧರ ತಿಲಕ್, ಎ.ವಿ. ಥಕ್ಕರ್ ಮೊದಲಾದವರು ಹಾಜರಿದ್ದ ಮೊಟ್ಟ ಮೊದಲನೆಯ ಅಖಿಲ ಭಾರತೀಯ ನಿಮ್ನವರ್ಗದ ಜನರ ಮಹಾ ಸಮ್ಮೇಳನ ಭಾರತಕ್ಕೆ ಅಂಟಿಕೊಂಡಿದ್ದ ಅಸ್ಪೃಶ್ಯತೆಯನ್ನು ಹೊಡೆದು ಹಾಕುವಂತೆ ಭಾರತೀಯರಿಗೆ ಕರೆಕೊಟ್ಟಿತು.[4]

1920ರಲ್ಲಿ ಅಂಬೇಡ್ಕರ್‌ರವರು ಕೊಲ್ಲಾಪುರದ ಸಾಹುಮಹಾರಾಜರ ನೆರವಿನಿಂದ 'ಮೂಕ ನಾಯಕ' ಎಂಬ ಪತ್ರಿಕೆಯಲ್ಲಿ ಹಿಂದೂ ಸಮಾಜದ ದೋಷ ದೌರ್ಬಲ್ಯಗಳನ್ನು ಬಯಲಿಗೆಳೆದರು. ಮಹಾರಾಷ್ಟ್ರದಲ್ಲಿ ದಲಿತ ಜನರ ಉದ್ಧಾರಕ್ಕಾಗಿ ಪಣತೊಟ್ಟ ಸವರ್ಣೀಯರಲ್ಲಿ ಅಗ್ರಗಣ್ಯರೆಂದರೆ ಕೊಲ್ಲಾಪುರದ ಸಾಹು ಮಹಾರಾಜರು.[5]

ಕೆಳವರ್ಗದವರಿಗೆ ರಾಜಕೀಯ ಮತ್ತು ನಾಗರೀಕ ಹಕ್ಕುಗಳನ್ನು ನೀಡಬೇಕೆಂದು 1930ರಿಂದ ನಡೆದ ಮೂರು ದುಂಡು ಮೇಜಿನ ಸಮ್ಮೇಳನಗಳಲ್ಲಿಯೂ ಭಾಗವಹಿಸಿದರು. ಬ್ರಿಟೀಷರು ಭಾರತವನ್ನು ಬಿಡುವ ಸೂಚನೆಗಳು ಕಂಡುಬಂದಾಗ ಡಾ. ಅಂಬೇಡ್ಕರರು ತುಳಿತಕ್ಕೊಳಗಾದ

ಜನಾಂಗಗಳಿಗೆ ನ್ಯಾಯಯುತವಾದ ಪ್ರಾತಿನಿಧ್ಯವನ್ನು ನೀಡುವಂತೆ ಒತ್ತಾಯಿಸಿದರು. ಈ ನಿರ್ಣಯದಿಂದ ದಲಿತರಿಗೆ ತಮ್ಮ ನಾಯಕರನ್ನು ತಮ್ಮ ಸೇವೆಗೆ ಮೀಸಲಾದ ಜನರನ್ನು ಆರಿಸುವ ಹಕ್ಕನ್ನು ನೀಡಿತು. ತಮ್ಮನ್ನು ಆಳಲು ತಾವೇ ಮುಂದಾಗುವಂತೆ ಈ ನಿರ್ಣಯ ಮುಂದೆ ಸಹಕಾರಿಯಾಗುತ್ತಿತ್ತಾದರೂ ಇದನ್ನು ಗಾಂಧೀಜಿಯವರು ವಿರೋಧಿಸಿದರು. ಇದರಿಂದಾಗಿ ಬಂದ ಅನೇಕ ರಾಜಕೀಯ ಒತ್ತಡದಿಂದಾಗಿ ಜನ ಸಮೂಹದ ಬೆಂಬಲ ಸಿಗಲಿಲ್ಲ. ಈ ಒತ್ತಡಕ್ಕೆ ಮಣಿದು ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಮೀಸಲಾತಿಯನ್ನು ಪಡೆದರು.[6]

1942ರಲ್ಲಿ ಅಂಬೇಡ್ಕರ್‌ರವರು ಕೆಲವೊಂದು ಸಂಘಗಳನ್ನು ಕಟ್ಟಿಕೊಂಡರು. ಅದರಲ್ಲಿ ಅಖಿಲ ಭಾರತೀಯ ಪರಿಶಿಷ್ಟ ವರ್ಗಗಳ ಫೆಡರೇಷನ್. ಸ್ಥಾಪಿಸಿ ಆ ಮೂಲಕ ಅಸ್ಪೃಶ್ಯರ ದೌರ್ಬಲ್ಯಗಳನ್ನು ನಿವಾರಿಸಿ ಸಮಾಜದಲ್ಲಿ ಉತ್ತಮ ಸ್ಥಾನಮಾನಗಳನ್ನು ದೊರಕಿಸಿಕೊಡಲು ರಾಜಕೀಯ ಶಕ್ತಿಯನ್ನು ಪಡೆಯಲು ಶಿಕ್ಷಣವೊಂದೇ ಕೆಳವರ್ಗದ ಜನರ ಮುನ್ನಡೆಗೆ ಸಾಧ್ಯ ಎಂದು ಮನಗಂಡರು. ಅಂಬೇಡ್ಕರ್‌ರವರು ಅಸ್ಪೃಶ್ಯತೆಯನ್ನು ತೊಡೆದು ಹಾಕುವಲ್ಲಿ ಮಹಾತ್ಮ ಗಾಂಧೀಜಿಯವರಿಗಿಂತ ಭಿನ್ನವಾದ ರೀತಿಯಲ್ಲಿ ಯೋಜನೆಯನ್ನು ಹಾಕಿಕೊಂಡರು. ಕೆಳವರ್ಗದವರ ಅಸಮಾನತೆಯನ್ನು ಹೋಗಲಾಡಿಸಲು ಮತ್ತು ಸಮಾನತೆಯನ್ನು ಹೊಂದಲು ಶಿಕ್ಷಣ ಹಾಗೂ ನಾಗರೀಕ ಹಕ್ಕುಗಳು ಬಹು ಮುಖ್ಯವಾದವು ಎಂದು ತಿಳಿಸಿದರು. ಇವರ ದೃಷ್ಟಿಯಲ್ಲಿ ಶಿಕ್ಷಣ ಮತ್ತು ರಾಜಕೀಯ ಮುನ್ನಡೆ ಕೆಳವರ್ಗದ ಜನರಿಗೆ ಮಾರ್ಗದರ್ಶನವಾಯಿತು.[7]

ಅಂಬೇಡ್ಕರ್ ರಾಷ್ಟ್ರಕ್ಕೆ ಒಂದು ಶ್ರೇಷ್ಠ ಸಂವಿಧಾನವನ್ನು ನೀಡಿ ಆ ಮೂಲಕ ರಾಷ್ಟ್ರದ ಅಖಂಡತೆಯನ್ನು ಎತ್ತಿ ಹಿಡಿದದ್ದು ಮಾತ್ರವಲ್ಲದೆ, ಮಹಿಳೆಯರನ್ನು ಪುರುಷನ ಸಮಾನಸ್ಥಾನದಲ್ಲಿ ಪ್ರತಿಷ್ಠಾಪಿಸುವ ಮೂಲಕ ಮಾನವ ಜೀವನದ ಪರಿಪೂರ್ಣತೆಯನ್ನು ಪರಮಾರ್ಥ ಸಿದ್ಧಿಪಥವನ್ನು ಸಿದ್ಧಪಡಿಸಿದರು. ಸ್ತ್ರೀ ಸಮಾನತೆಯನ್ನು ಕುರಿತ ಅಂಬೇಡ್ಕರ್‌ರ ಈ ವೈಚಾರಿಕ ಚಿಂತನೆಯ ಹಿನ್ನೆಲೆಯಲ್ಲಿ ಸ್ತ್ರೀಸಂಗವಿಲ್ಲದೆ ಮಾನವನ ಬದುಕು ಅಪರಿಪೂರ್ಣ ಎಂದಿದ್ದಾರೆ. ಇದನ್ನು ಅಂಬೇಡ್ಕರ್ ಈ ರೀತಿ ಬರೆಯುತ್ತಾರೆ.

ಮಹಿಳೆಯರನ್ನು ತುಚ್ಛೀಕರಿಸುವ ಮೂಲಕ ಇಡೀ ಮಾನವ ಜನಾಂಗವೇ ಒಂದರ್ಥದಲ್ಲಿ ಘನಹೀನ ಸ್ಥಿತಿಗೆ ತಳ್ಳಿದ ಮನುವಿಚಾರ ವಾದಿಯ ಹಿನ್ನೆಲೆಯಲ್ಲಿಯೇ ಕಾನೂನುಗಳ ಮೂಲಕ ಮಹಿಳೆಯರನ್ನು ಮಾನವೋನ್ನತ ಸ್ತರದಲ್ಲಿ ಗೌರವಿಸಿದ ಅಂಬೇಡ್ಕರರ ಚಿಂತನೆ ಹಾಗೂ ಆ ಬಗೆಗಿನ ಅವರ ದೂರಗಾಮಿ ಸತ್ಯ ಶೋಧನೆ ಮತ್ತು ಅವರ ಪ್ರತಿಪಾದನೆ ಮಾತ್ರವಲ್ಲದೆ ಅದರ ಪ್ರತಿಷ್ಠಾಪನೆಗೆ ಸಮಸ್ತಮಾನವ ಜನಾಂಗ ಮನನ ಮಾಡಬೇಕಾದ ಹಾಗೂ ಗೌರವದಿಂದ ಸ್ಮರಿಸಬೇಕಾದ ಸತ್ಯಸಂಗತಿಯಾಗಿದೆ.[8]

ಅಂಬೇಡ್ಕರ್ ಮಹಿಳೆಯರ ವೃತ್ತಿ, ಸ್ವಾತಂತ್ರ್ಯ, ಶಿಕ್ಷಣ, ಆಸ್ತಿ ಹಕ್ಕು ಮತ್ತು ಆತ್ಮಗೌರವಗಳಂತಹ ವಿಷಯಗಳು ವೈದಿಕರಿಗೂ ಯಾವುದೋ ಪರಲೋಕದ ವಿಚಾರಗಳಾಗಿದ್ದವೋ ಅಂತಹ ಗಹನ ಆಲೋಚನೆಯನ್ನು ಸರಳಗೊಳಿಸಿ, ತಿಳಿಗೊಳಿಸಿ, ಮಡಿವಂತರ ಮುಂದೆ ಮಂಡಿಸುವುದು ಅಂಬೇಡ್ಕಸರರ ಏಕೈಕ ಉದ್ದೇಶ. ತನ್ಮೂಲಕ ಮಹಿಳೆಗೊಂದು ಗಣ ತಂತ್ರಾತ್ಮಕ ವ್ಯಕ್ತಿತ್ವ ನಿರ್ಮಾಣ ಮಾಡುವುದು ಕೂಡ ಆಗಿತ್ತು. ಭಾರತದಲ್ಲಿ ಮಹಿಳೆಯರ ಸ್ಥಾನಮಾನಕ್ಕಾಗಿ ಹೋರಾಡಿದವರು ಅಂಬೇಡ್ಕರ್, ಕೆಳಜಾತಿಯ ಮಹಿಳೆಯರ ಹಕ್ಕು , ಶಿಕ್ಷಣ, ಸ್ವಾತಂತ್ರ್ಯಗಳಿಗೆ ಧಕ್ಕೆಯಾದುದು ವೈದಿಕ ಜನಾಂಗದ ಮಹಿಳೆಯರಿಂದಲೇ, ಅಸ್ಪೃಶ್ಯ ಮಹಿಳೆಯರ ಶಿಕ್ಷಣಕ್ಕಾಗಿ ಸ್ವಾತಂತ್ರ್ಯಕ್ಕಾಗಿ ಮತ್ತು ಸ್ಥಾನಮಾನಕ್ಕಾಗಿ ಅಂಬೇಡ್ಕರ್‌ರವರು ಹೋರಾಡಿದ್ದಾರೆ.[9]

ಸ್ತ್ರೀಯರನ್ನು ಕಾಡುತ್ತಾ ಬಂದ ಸಾಮಾಜಿಕ ಸಮಸ್ಯೆಗಳನ್ನು ನಿವಾರಿಸಿ ಪುರುಷರಂತೆ ಸ್ತ್ರೀಯರಿಗೂ ನಾಗರೀಕ ಹಕ್ಕುಗಳ ಚಲಾವಣೆಗೆ ಅವಕಾಶ ನೀಡಿ ಸ್ತ್ರೀಯರಿಗೆ ರಾಜಕೀಯ, ಆರ್ಥಿಕ, ಸಹಭಾಗಿತ್ವ ಅವಕಾಶ ಒದಗಿಸುವುದು ಮಹಿಳಾ ಶಿಕ್ಷಣ ಹಾಗೂ ಮಹಿಳೆಯರ ಏಳಿಗೆಯ ದೃಷ್ಟಿಯಿಂದ ಹಲವಾರು ಮಹಿಳಾ ನೇತಾರರು ಶ್ರಮಿಸಿದ್ದಾರೆ. ಅವರುಗಳೆಂದರೆ ತೌರ್‌ದತ್, ಪಂಡಿತ್ ರಮಾಬಾಯಿ, ಸ್ವರ್ಣಕುಮಾರಿ ದೇವಿ, ಕಾಮಿನಿರೈ, ಅನಿಬೆಸಂಟ್ ಮತ್ತು ಸರೋಜಿನಿ ನಾಯ್ಡು ಮೊದಲಾದ ನೇತಾರರು ಶ್ರಮಿಸಿದ್ದಾರೆ.

1887ರಲ್ಲಿ ಪಂಡಿತ್ ರಮಾಬಾಯಿಯವರು The Education of Hindu Women ಎಂಬ ಚಳುವಳಿಯನ್ನು ಪ್ರಾರಂಭಿಸಿದರು. ಇದರಿಂದ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿದರು.

ಮಹಿಳೆಯರಲ್ಲಿ ಜಾಗೃತಿಯನ್ನು ಮೂಡಿಸಲು ಅನಿಬೆಸೆಂಟ್‌ರವರು ಹೋಂರೂಲ್ ಚಳುವಳಿಯನ್ನು ಪ್ರಾರಂಭಿಸಿದರು. 1917ರ Women's Indian Association ಅನ್ನು ಸರೋಜಿನಿ ನಾಯ್ಡು ಅನಿಬೆಸೆಂಟ್‌ರವರು ಸ್ತ್ರೀಯರ ರಾಜಕೀಯ ಹಾಗೂ ಶೈಕ್ಷಣಿಕ ಹಕ್ಕುಗಳಿಗಾಗಿ ಸ್ತ್ರೀ ಸಮಸ್ಯೆಗಳ ನಿವಾರಣೆಗಾಗಿ ಪರಿಶ್ರಮಿಸಿದರು.[10]

## 1.2 ಅಧ್ಯಯನದ ಉದ್ದೇಶ

ಸಮಾಜದ ಎಲ್ಲಾ ಬದಲಾವಣೆಗೂ ಪ್ರಮುಖ ಅಸ್ತ್ರಯೆಂದರೆ ಶಿಕ್ಷಣ. ಶಿಕ್ಷಣವು ಆರ್ಥಿಕ, ಸಾಮಾಜಿಕ ಬದಲಾವಣೆಗೆ ಪ್ರಮುಖವಾದ ಅಂಶವಾಗಿದೆ. ಶತಶತಮಾನಗಳಿಂದಲೂ ಸ್ತ್ರೀಯರು ಅದರಲ್ಲಿಯೂ ಪರಿಶಿಷ್ಟ ಜಾತಿಯ ಸ್ತ್ರೀಯರು ಎಲ್ಲಾ ಕ್ಷೇತ್ರಗಳಲ್ಲಿಯೂ ಹಿಂದುಳಿದಿದ್ದಾರೆ. ಸಮಾಜದಲ್ಲಿ ಉನ್ನತ ಸ್ಥಾನಮಾನ ಪಡೆಯಬೇಕಾದರೆ ಶಿಕ್ಷಣದಿಂದ ಮಾತ್ರ ಸಾಧ್ಯ.

ಈ ಅಧ್ಯಯನವು ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿ ವಿವಿಧ ವಿಭಾಗಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರನ್ನು ಒಳಗೊಂಡಿದ್ದು ಈ ಅಧ್ಯಯನದ ಪ್ರಸ್ತುತ ಅಧ್ಯಯನದ ಉದ್ದೇಶಗಳೆಂದರೆ

1. ಮಹಿಳಾ ವಿದ್ಯಾರ್ಥಿನಿಯರ ಸಾಮಾಜಿಕ, ಆರ್ಥಿಕ ಹಿನ್ನೆಲೆಯನ್ನು ವಿಶ್ಲೇಷಿಸುವುದು.
2. ಮಹಿಳಾ ವಿದ್ಯಾರ್ಥಿನಿಯರ ಸಾಮಾಜಿಕ ಲಕ್ಷಣಗಳಾದ ಕುಟುಂಬದ ಗಾತ್ರ, ಸದಸ್ಯರ ವಿವರ, ಆರ್ಥಿಕ ವ್ಯಾಪ್ತಿ, ವರಮಾನ, ಜಾತಿ, ಉಪಜಾತಿ ವೀಕ್ಷಿಸುವುದು.
3. ಅವರ ಶೈಕ್ಷಣಿಕ ಹಿನ್ನೆಲೆಯನ್ನು ವೀಕ್ಷಿಸುವುದು. ಅವರ ವಿಶ್ವವಿದ್ಯಾಲಯ ಭೋದನಾ ಮಾಧ್ಯಮ, ಪರೀಕ್ಷೆಯಲ್ಲಿ ಉತ್ತೀರ್ಣತೆ ಮುಂತಾದವುಗಳು.
4. ಇವರು ಪ್ರಸ್ತುತ ಎದುರಿಸುತ್ತಿರುವ ಶೈಕ್ಷಣಿಕ ಸಮಸ್ಯೆಗಳನ್ನು ವಿಶ್ಲೇಷಿಸುವುದು
5. ಸರ್ಕಾರದ ಸೌಲಭ್ಯಗಳ ಬಗ್ಗೆ ಇವರಿಗಿರುವ ಅರಿವು ಮತ್ತು ಅವುಗಳನ್ನು ಉಪಯೋಗಿಸುವ ರೀತಿಯನ್ನು ತಿಳಿಯುವುದು.
6. ವಸತಿ ನಿಲಯಗಳಲ್ಲಿ ಪರಿಶಿಷ್ಟ ಜಾತಿ ವಿದ್ಯಾರ್ಥಿನಿಯರಲ್ಲಿ ಹೊಂದಿರುವ ಸಾಮಾಜಿಕ ಸಂಬಂಧಗಳನ್ನುಗುರುತಿಸುವುದು.

7. ಜಾತಿಬೇಧ ಅನುಭವಗಳನ್ನು ವಿಶ್ಲೇಷಿಸುವುದು

8. ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಉನ್ನತ ಶಿಕ್ಷಣದಲ್ಲಿ ಹೊಂದಿರುವ ವಿವಿಧ ಮಜಲುಗಳನ್ನು ತಿಳಿಯುವುದು.

9. ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಾಮಾಜಿಕ ಚಲನೆಯನ್ನು ಗುರ್ತಿಸುವುದು

10. ಉನ್ನುತ ಶಿಕ್ಷಣಕ್ಕೆ ಬರಲು ಕಾರಣ ತಿಳಿಯುವುದು

11. ಇವರು ಶಿಕ್ಷಣಕ್ಕೆ ಬಂದ ನಂತರ ಇವರ ಸಮಸ್ಯೆಗಳೇನೆಂದು ತಿಳಿಯುವುದು.

12. ಇವರು ಮೀಸಲಾತಿಯ ಬಗ್ಗೆ ಹೊಂದಿರುವ ಅಭಿಪ್ರಾಯ

13. ಸರ್ಕಾರದ ಸೌಲಭ್ಯಗಳ ಬಗ್ಗೆ ಎಷ್ಟು ತಿಳಿದಿದ್ದಾರೆಂದು ತಿಳಿಯುವುದು

14. ದೈಹಿಕ ಮತ್ತು ಮಾನಸಿಕ ಒತ್ತಡವನ್ನು ತಿಳಿಯುವುದು

15. ಒಟ್ಟಾರೆ ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರ ಜೀವನದ ಸಂಪೂರ್ಣ ಚಿತ್ರ ತಿಳಿಯುವುದು.

## 1.3 ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಅಧ್ಯಯನವು ವ್ಯಾಪಕವಾಗಿದ್ದು ಉನ್ನತ ಶಿಕ್ಷಣದಲ್ಲಿ ತೊಡಗಿರುವ ಮಹಿಳಾ ವಿದ್ಯಾರ್ಥಿನಿಯರ ಬಗ್ಗೆ ಒಂದು ಅಧ್ಯಯನ ಬೆಂಗಳೂರು ನಗರದ ಜ್ಞಾನಭಾರತಿ ಆವರಣದಲ್ಲಿ ಸ್ನಾತಕೋತ್ತರ ಕೇಂದ್ರಗಳನ್ನೊಳಗೊಂಡಂತೆ ಇದಲ್ಲದೆ ವಿಜ್ಞಾನ ಇಂಜಿನಿಯರಿಂಗ್, ಎಂ.ಇಡಿ., ಕಾನೂನು ಶಾಸ್ತ್ರ ಮುಂತಾದ ವಿಭಾಗಗಳ ವಿದ್ಯಾರ್ಥಿನಿಯರ ಬಗ್ಗೆ ಅಧ್ಯಯನವನ್ನು ಕೈಗೊಳ್ಳಲಾಗುವುದು.

## 1.4 ಅಧ್ಯಯನದ ಮಹತ್ವ

ಪ್ರಸ್ತುತ ಅಧ್ಯಯನವು ಬೆಂಗಳೂರು ವಿಶ್ವವಿದ್ಯಾಲಯದ ವಿವಿಧ ವಿಭಾಗಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರನ್ನು ಒಳಗೊಂಡಿದೆ. ಈ ಅಧ್ಯಯನವು ಸಾಮಾಜಿಕ ಶೈಕ್ಷಣಿಕ ಪರಿವರ್ತನೆಯ ಬಗ್ಗೆ ಅಧ್ಯಯನ ಮಾಡುವುದಕ್ಕಾಗಿಯೇ ಕೈಗೊಂಡ ಅಧ್ಯಯನವಾಗಿದ್ದು, ಇದು ವಿವಿಧ ವಿದ್ಯಾರ್ಹತೆಯನ್ನು ಹೊಂದಿದ ವಿದ್ಯಾರ್ಥಿನಿಯರ ಸಾಮಾಜಿಕ, ಆರ್ಥಿಕ ಅಂಶದ ಆಧಾರದ ಮೇಲೆ ಅಧ್ಯಯನ ಮಾಡುವುದಾಗಿದೆ.

ಭಾರತದ ಜಾತಿವ್ಯವಸ್ಥೆಯು ಸ್ತರವಿನ್ಯಾಸದ ಪ್ರಮುಖ ರೂಪವಾಗಿದೆ. ಜಾತಿ ವ್ಯವಸ್ಥೆಯು ಶ್ರೇಣಿ ವ್ಯವಸ್ಥೆಯಿಂದ ಕೂಡಿದ್ದು ಅತ್ಯಂತ ಕೆಳಸ್ತರದಲ್ಲಿರುವ ಶೂದ್ರರು ಶತಮಾನಗಳಿಂದಲೂ ಅನೇಕ ಸಮಸ್ಯೆಗಳನೆದುರಿಸುತ್ತಾ ಬಂದಿದ್ದಾರೆ. ಅದರಲ್ಲಿಯೂ ಮಹಿಳೆಯರು ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದರು. ಆದರೆ ಬ್ರಿಟೀಷರು ಭಾರತಕ್ಕೆ ಆಗಮಿಸಿದ ನಂತರ, ಸ್ವಾತಂತ್ರ್ಯ ನಂತರ ಹಲವಾರು ರೀತಿಯಲ್ಲಿ ಬದಲಾವಣೆ ತಂದರೂ ಕೆಲವರಿಗೆ ಈ ಸೌಲಭ್ಯವನ್ನು ಪಡೆಯಲು ಸಾಧ್ಯವಾಗಿರುವುದಿಲ್ಲ. ಇವರಿಗೆ ಸಂವಿಧಾನಾತ್ಮಕವಾಗಿಯೂ ಅನೇಕ ಸೌಲಭ್ಯಗಳನ್ನು ನೀಡಲಾಯಿತು. ಇದರಿಂದ ಭಾರತೀಯ ಸಾಮಾಜಿಕ ರಚನೆಯ ಅತ್ಯಂತ ಕೆಳಮಟ್ಟದಲ್ಲಿರುವ ಈ ಜನರು ಇದರ ಪ್ರಯೋಜನವನ್ನು ಪಡೆಯುವಲ್ಲಿ ಕೆಲವೇ ಜನರಿಗೆ ಮಾತ್ರ ಸಾಧ್ಯವಾಗಿದ್ದು, ಇವರನ್ನು ಉನ್ನತ ಮಟ್ಟಕ್ಕೆ ಕೊಂಡೊಯ್ಯುವಲ್ಲಿ ಹಾಗೂ ಸಾಮಾಜಿಕ ಚಲನೆ, ಶಿಕ್ಷಣದ ಸಾಧನೆಯಿಂದ ಎಂದು ಹೇಳಬಹುದು.

ಪ್ರಮುಖವಾಗಿ ಈ ಅಧ್ಯಯನವು ಯೋಜನಾಕಾರರಿಗೆ, ಸಂಶೋಧಕರಿಗೆ ಅನುಕೂಲವಾಗಿದೆ.

## 1.5 ಸಂಶೋಧನಾ ವೈಧಾನಿಕತೆ

ಸಂಶೋಧನಾ ಕಾರ್ಯವನ್ನು ಕ್ರಮಬದ್ಧವಾಗಿ ಕೈಗೊಳ್ಳಲಾಗಿದ್ದು, ಅದನ್ನು ಅನೇಕ ಹಂತಗಳಾಗಿ ವಿಂಗಡಿಸಿ ಪ್ರತಿಯೊಂದು ಹಂತದಲ್ಲಿಯೂ ಶ್ರಮವಹಿಸಿ ಸಂಶೋಧನಾ ಕಾರ್ಯವನ್ನು ನಿರ್ವಹಿಸಲಾಗಿದೆ.

ಸ್ತ್ರೀವಾದ ಮಹಿಳಾ ಅಧ್ಯಯನದ ತಾತ್ವಿಕಗಳ ಅನ್ವಯದಿಂದ ನಾವು ಮಹಿಳಾ ವಿದ್ಯಾರ್ಥಿನಿಯರನ್ನು ಸಂದರ್ಶಿಸಿದಾಗ ನಾವು ಅವರಿಂದ ಸರಿಯಾದ ಮಾಹಿತಿಯನ್ನು ಪಡೆಯಬಹುದು. ಸಾಮಾಜಿಕ ಸಂಶೋಧನೆಯ ಅನ್ವಯ ಮಹಿಳೆಯರನ್ನು ಕುರಿತು ಅಧ್ಯಯನ ಮಾಡಲು ಸಾಧ್ಯವಿಲ್ಲ. ನಾವು ಮಹಿಳೆಯರನ್ನು ನಾವು ಸ್ತ್ರೀವಾದಿ ದೃಷ್ಟಿಕೋನದಿಂದ ಅಧ್ಯಯನ ಮಾಡಬೇಕು. ಸ್ತ್ರೀ ಸಂಶೋಧನೆಗೆ ಹೆಚ್ಚು ಸೂಕ್ತವಾದ ವಿಧಾನವೆಂದರೆ ಸ್ತ್ರೀವಾದಿ ದೃಷ್ಟಿಕೋನದಿಂದ ಮಾತ್ರ ಸಾಧ್ಯ. ಮಹಿಳಾ ಅಧ್ಯಯನದ ತಾತ್ವಿಕತೆಗಳ ಅನ್ವಯದಿಂದ ನಾವು ಅಧ್ಯಯನ ಮಾಡಿದಾಗ ನಾವು ಅವರ ಗಂಭೀರವಾದ ಸಮಸ್ಯೆಯನ್ನು ಗುರ್ತಿಸಿ ಅವುಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದು. ಆದ್ದರಿಂದ ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನದ ತಾತ್ವಿಕತೆಗಳು ಇತರ ಸಂಶೋಧನೆಗಿಂತ ಭಿನ್ನವಾಗಿ ಇವು ಸ್ತ್ರೀ ಸಂಶೋಧನೆಗೆ ಹೆಚ್ಚು ಮಹತ್ವಪೂರ್ಣವಾಗಿದೆ.

ಪ್ರಸ್ತುತ ಅಧ್ಯಯನವು ಕ್ಷೇತ್ರ ಅಧ್ಯಯನವನ್ನು ಅವಲಂಭಿಸಿದ್ದು, ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವಂತಹ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರನ್ನು ಒಳಗೊಂಡಿದೆ.

ಅಧ್ಯಯನಕ್ಕೆ ಪೂರ್ವಭಾವಿಯಾಗಿ ಮಾದರಿ ವಿಧಾನದ ಮೂಲಕ ಮಾದರಿ ಗಾತ್ರವನ್ನು ನಿಗದಿ ಮಾಡಿಕೊಂಡು ಉದ್ದೇಶಪೂರ್ವಕ ಮಾದರಿಯ ಆಧಾರದ ಮೇಲೆ ಬೆಂಗಳೂರು ವಿಶ್ವವಿದ್ಯಾಲಯದ ವಿವಿಧ ವಿಭಾಗಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಲ್ಲಿ 60 ವಿದ್ಯಾರ್ಥಿನಿಯರನ್ನು ಆಯ್ಕೆ ಮಾಡಿಕೊಂಡು ಅವರ ಅಭಿಪ್ರಾಯದ ಆಧಾರದ ಮೇಲೆ ಈ ಸಮಸ್ಯೆಯನ್ನು ವಿಶ್ಲೇಷಿಸಲಾಗಿದೆ.

ಮಾಹಿತಿ ಸಂಗ್ರಹಣೆಯ ಸಾಮಾಜಿಕ ಸಂಶೋಧನೆಯ ಒಂದು ಮುಖ್ಯ ಹಂತ ಮಾಹಿತಿಯನ್ನು ಪ್ರಾಥಮಿಕ ಮತ್ತು ಮಾಧ್ಯಮಿಕ ಮೂಲಗಳಿಂದ ಸಂಗ್ರಹಿಸಲಾಗಿದೆ. ಪ್ರಾಥಮಿಕ ಮೂಲಗಳೆಂದರೆ ಅವಲೋಕನ ಮತ್ತು ಪ್ರಶ್ನಾವಳಿ ಮಾಧ್ಯಮಿಕ ಮೂಲಗಳೆಂದರೆ ಪುಸ್ತಕಗಳು, ನಿಯತಕಾಲಿಕೆಗಳ ಮತ್ತು ಗ್ರಂಥಗಳು ಅಧ್ಯಯನಕ್ಕೆ ಅಗತ್ಯವಾದ ಮಾಹಿತಿಯನ್ನು ಪಡೆಯಲು ಮಾರ್ಗದರ್ಶಕರ ಮೇಲ್ವಿಚಾರಣೆಯಲ್ಲಿ ಪ್ರಶ್ನಾವಳಿಯನ್ನು ರಚಿಸಿ ಸ್ನಾತಕೋತ್ತರ ಪದವಿಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಯರನ್ನು ನೇರವಾಗಿ ಸಂದರ್ಶನ ನಡೆಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

ಈ ಅಧ್ಯಯನವನ್ನು ಪ್ರಶ್ನಾವಳಿಯ ಮೂಲಕ ಅಂದರೆ, ಪ್ರಶ್ನಾವಳಿಯನ್ನು ರಚಿಸಿ ಮಾಹಿತಿದಾರರಿಗೆ ಹಂಚಿ ಅವರಿಂದ ಉತ್ತರವನ್ನು ಪಡೆಯಬಹುದಿತ್ತು. ಆದರೆ ಮಾಹಿತಿದಾರರು ಕೆಲವೊಂದು ಪ್ರಶ್ನೆಗಳಿಗೆ ನಿರಾಸಕ್ತಿಯಿಂದಲೋ ಅಥವಾ ಸಂಶಯಾಸ್ಪದ ಮನೋಭಾವನೆಯಿಂದಲೋ ಉತ್ತರಿಸದ ಕಾರಣ ಈ ಸಮಸ್ಯೆಯ ಮಾಹಿತಿಗಾಗಿ ಸಂದರ್ಶನ ವಿಧಾನವೇ ಸೂಕ್ತವೆಂದು ಮತ್ತು ಅರಚಿತ ಪ್ರಶ್ನಾವಳಿ ಸಂದಶನ ವಿಧಾನಗಳ ಸಂಯುಕ್ತ ಅಳವಡಿಕೆ ಈ ವಿಧಾನದಿಂದ ಯಾವುದೇ ಸಮಸ್ಯೆಯನ್ನು ಕೂಲಂಕುಷವಾಗಿ ಸಂದರ್ಶಿತರೊಡನೆ ಚರ್ಚಿಸಿ ಮಾಹಿತಿಯನ್ನು ಪಡೆಯಬಹುದೆಂಬುದಾಗಿ ಪ್ರಶ್ನಾವಳಿ ವಿಧಾನವನ್ನು ಅನುಸರಿಸದೆ, ಸಂದರ್ಶನ ವಿಧಾನವನ್ನು ಆಯ್ಕೆ ಮಾಡಿಕೊಳ್ಳಲಾಯಿತು.

ಸಂಗ್ರಹಿಸಿದ ಮಾಹಿತಿಯನ್ನು ಜಾಗರೂಕತೆಯಿಂದ ಪರಿಶೀಲನೆ ಮಾಡಿ ಸ್ಪಷ್ಟಗೊಳಿಸಲಾಗಿದೆ. ಹಾಗೂ ಸಂಖ್ಯಾಮಾಹಿತಿಯನ್ನು ಅನೇಕ ವಿಭಾಗಗಳನ್ನಾಗಿ ಮಾಡಿ ಸಂಖ್ಯಾ ವಿನ್ಯಾಸದ ಮೂಲಕ ಪುನರಾವರ್ತನಾ ಪಟ್ಟಿಯನ್ನು ತಯಾರಿಸಲಾಗಿದೆ. ಸಂಬಂಧಪಟ್ಟ ಅಧ್ಯಯನಕ್ಕೆ ಪುನರಾವರ್ತನ ಪಟ್ಟಿಯನ್ನು ಸೇರಿಸಿ ವಿಶ್ಲೇಷಿಸಲಾಗಿದೆ.

ಅಡಿಟಿಪ್ಪಣಿಗಳು


1, G.S Ghurye ‘ Casts and Pace in India’, P-306.

2 ಸಿ.ಪಿ.ಕೃಷ್ಣಕುಮಾರ್, ವಿಚಾರ ನಿಮಿಷ

3 ಚ.ನ.ಶಂಕರ್‌ರಾವ್, ಭಾರತೀಯ ಸಮಾಜದ ಅಧ್ಯಯನ, ಪುಟ-196.

4. ದೇ. ಜವರೇಗೌಡ, ಕ್ರಾಂತಿಕಾರ ಡಾ.ಅಂಬೇಡ್ಕರ್. ಪುಟ-44-46.

5. ಎಚ್.ಜಿ. ಲಕ್ಕಪ್ಪಗೌಡ, ಅಂಬೇಡ್ಕರ್. ಪುಟ-40

6 ಚಾಂಡಾಳ ಕರ್ನಾಟಕದಲ್ಲಿ ದಲಿತ ಚಳುವಳಿ. ಪುಟ-11

7 ರಾವ್ ಬಿ.ಆರ್. ‘ಭಾರತ ರತ್ನ ಅಂಬೇಡ್ಕರ್’ ಪುಟ 137.

8 ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ. 1995, ಪುಟ-381-386

9 Ram Sharm, ‘Education of Women’s of Scheduled Caste and Scheduled Tribes’, 1996, P-11

10 Gridhar Gomango’ Constitutioonal Provisions for the scheduled castes and the scheduled tribes, 1992, P= 34

# ಅಧ್ಯಾಯ-2

# ಮಹಿಳಾ ಶಿಕ್ಷಣ ನಡೆದು ಬಂದ ದಾರಿ

2.1 ಶೈಕ್ಷಣಿಕ ಐತಿಹಾಸಿಕ ಹಿನ್ನೆಲೆ

2.1.1 ಪುರಾತನ ಕಾಲದಲ್ಲಿ ಶಿಕ್ಷಣ

2.1.2 ಮಧ್ಯಕಾಲೀನ ಯುಗದ ಶಿಕ್ಷಣ

2.1.3 ಆಧುನಿಕ ಕಾಲದ ಶಿಕ್ಷಣ

2.1.4 ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸರ್ಕಾರ ನೀಡಿರುವ ಸೌಲಭ್ಯಗಳು

2.1.5 ಸಾಹಿತ್ಯಾವಲೋಕನ

2.1.6 ಸಮಸ್ಯೆಯ ಆಯ್ಕೆ

# ಅಧ್ಯಾಯ - 2

## ಮಹಿಳಾ ಶಿಕ್ಷಣ ನಡೆದುಬಂದ ದಾರಿ

Female ಎಂಬ ಪಂದವು ಫ್ರೆಂಚ್ ಪದ Femelle ಮತ್ತು ಲ್ಯಾಟಿನ್ ಭಾಷೆಯ ಇದರ ಅರ್ಥ ಹುಡುಗಿ ಎಂಬ ಅರ್ಥವನ್ನು ನೀಡುತ್ತದೆ. Femella ಎಂದರೆ ಹೆಂಗಸು ಎಂಬರ್ಥವನ್ನು ನೀಡುತ್ತದೆ. ಹೀಗೆ Female ಎಂಬ ಹುಡುಗಿ ಅಥವಾ ಹೆಂಗಸುಗೆ ಅನ್ವಯಿಸುವಂತಹ ಪದವಾಗಿದೆ. Virtue of Sex ಗೆ ಸಂಬಂಧಿಸಿದ್ದು ಅಥವಾ ಅಂಡದಿಂದ ಉತ್ಪತ್ತಿಯಾದ್ದಂತಹ ಲಿಂಗ.[1] ಹೀಗೆ Female ಎಂಬ ಪದಕ್ಕೆ ಸಮಾನಾರ್ಥವಾಗಿ ಬಳಸುವ ಪದವೇ ಹುಡುಗಿ ಅಥವಾ ಹೆಂಗಸು ಎಂಬ ಪದವಾಗಿದೆ. ಪ್ರಸ್ತುತ ಅಧ್ಯಯನವು ಇವರನ್ನು ಕುರಿತದ್ದಾಗಿದೆ.[2]

ಮಾನವನ ಹಕ್ಕುಗಳ ಅನ್ವಯವಾಗುವಂತೆ ಸ್ತ್ರೀಯರನ್ನು ಮಾನವ ಜೀವಿಗಳಾಗಿ ಪುರುಷರಷ್ಟು ಸರಿಸಮಾನವಾಗಿ ನೋಡುವಂತೆ ಅನೇಕ ರೀತಿಯ ನಡೆದ ಮೇಲೆ ಇವರಿಗೆ ಮಾನವನ ಹಕ್ಕುಗಳು, ಜವಾಬ್ದಾರಿಗಳಿಗೆ ಹೋರಾಟಗಳು ನಡೆಯಿತು. ವಿಶ್ವಸಂಸ್ಥೆಯು 1945ರಲ್ಲಿ ತಿರು ತಿರುಗಿ ಹೇಳಿತು. ೧೯೬೭ ನೈರೋಬಿಯಾದಲ್ಲಿ ನಡೆದಂತಹ ಸಮ್ಮೇಳನದಲ್ಲಿ ಸ್ತ್ರೀಯರ ವಿರುದ್ಧದ ಎಲ್ಲಾ ರೀತಿಯ ತಾರತಮ್ಯತೆಗಳಿಂದ ಬಿಡುಗಡೆ ಗೊಳಿಸಬೇಕೆಂದು ತಿರು ತಿರುಗಿ ಹೇಳತೊಡಗಿತು. (Reiterated) ನಂತರ ೧೯೭೫ರಲ್ಲಿ ನಡೆದ್ದಂತಹ ಸಮ್ಮೇಳನದಲ್ಲಿ (Pillai : 1995 : 1 ನಂತರ ೧೯೭೫ರಲ್ಲಿ ನಡೆದಂತಹ ಸಮ್ಮೇಳನದಲ್ಲಿ ಇದನ್ನು ಘೋಷಣೆಯನ್ನು ಹೊರಡಿಸಿತ್ತು. (Women and Empowerment) ಈ ರೀತಿಯ ಗೋಷಣೆಯು ಸಾಮಾಜಿಕವಾಗಿ ಗುರಿಯನ್ನು ಸಾಧಿಸಲು ವಿಕಾಸಾತ್ಮಕ ವಾಗಿ ಹೇಳಬಹುದು. (Assertins)ಏಕೆಂದರೆ ಮಾನವನ ಇತಿಹಾಸವು ಆರಂಭದ ಯುಗದಿಂದಲೂ (Epochs) ಸ್ತ್ರೀ ಮತ್ತು ಪುರುಷರ ನಡುವೆ ಲಿಂಗಾಧಾರಿತ ಶ್ರಮವಿಭಜನೆಯನ್ನು ಆಧರಿಸಿದ ಅಸಮಾನತೆಯನ್ನು ಕಾಣಬಹುದು. ಇದು ಎಲ್ಲಾ ಸ ಮಯಗಳಲ್ಲಿ ವಿಭಿನ್ನ ಮುಖಗಳಲ್ಲಿ ಅಸಮಾನತೆಯ ರೂಪಗಳನ್ನು ಕಾಣಬಹುದಾಗಿದೆ.

ಸ್ತ್ರೀ ಮತ್ತು ಪುರುಷರ ಅಸಮಾನತೆಯು ಸಾಮಾಜಿಕ ಸ್ತರವಿನ್ಯಾಸದ ಒಂದು ರೂಪವಾಗಿದೆ. ಈಸಾಮಾಜಿಕ ಸ್ತರ ವಿನ್ಯಾಸವು ಸಾಮಾಜಿಕ ಗುಂಪುಗಳನ್ನು ಏಣಿಶ್ರೇಣಿಯಾಕಾರದಲ್ಲಿ ಬಲ, ಅಂತಸ್ತು ಸಾಮಾಜಿಕ ವಿಕಾಸ, ಮಾನಸಿಕ ತೃಪ್ತಿಗಳಾಧಾರದ ಮೇಲೆ ಮಾಡಿರುವಂತಹ ಒಂದು ವ್ಯವಸ್ಥೆ.[3]

ಟುಮಿನ್‌ರವರು ವ್ಯಾಖ್ಯಾನಿಸಿರುವಂತೆ ಶಕ್ತಿ, ಸಾಮಾಜಿಕ ವಿಕಾಸ, ಮಾನಸಿಕ ತೃಪ್ತಿಗಳು ಈ ಕೆಳಕಂಡಂತೆ ಕಾಣಿಸುತ್ತವೆ.

೧. ಶಕ್ತಿಯು ಪ್ರತಿಫಲವನ್ನು ಪಡೆಯುವ ಸಾಮರ್ಥ್ಯವಾಗಿದೆ.

೨. ಆಸ್ತಿಯು ಸರಕು ಮತ್ತು ಸೇವೆಯ ಮೇಲಿನ ಹೊಂದಿರುವ ಹಕ್ಕು

೩. ವಿಕಾಸವು ಒಂದು ಅಂತಸ್ತಿನ ಸಾಮಾಜಿಕ ನ್ಯಾಯವಾಗಿದೆ. ಅಥವಾ ಸ್ಥಾನವು ಇನ್ನೊಂದಕ್ಕಿಂತ ಹೆಚ್ಚು ಗೌರವಯುತವಾಗಿರುವುದು ಅಥವಾ ಹೆಚ್ಚು ಜನಪ್ರಿಯವಾಗಿರುವುದು.

೪. ಮಾನಸಿಕ ತೃಪ್ತಿಯು ಇದು ಸಂತೋಷ ಮತ್ತು ತೃಪ್ತಿಯನ್ನೊಳಗೊಂಡಿದೆ. ಇವುಗಳು ಆಸ್ತಿ -ಶಕ್ತಿ ಮತ್ತು ವಿಕಾಸವನ್ನು ವಿಭಜೀಕರಣಗೊಳಿಸುವುದಿಲ್ಲ.

ಸ್ತ್ರೀ ಪುರುಷರ ನಡುವಿನ ಸಮಾನತೆಯು ಮುಖ್ಯವಾಗಿ ಲೈಂಗಿಕ ಅಸಮಾನತೆ ಅಥವಾ ಲಿಂಗ ಸಮಾನತೆಗೆ ಸಂಬಂಧಿಸಿದಂತೆ ಇಬ್ಬರ ನಡುವಿನ ವ್ಯತ್ಯಾಸವಾಗಿದೆ.

Oakley 1972......ಸ್ತ್ರೀ ಪುರುಷರ ನಡುವಿನ ಇವರು ಹೇಳುವಂತೆ ಸ್ತರವಿನ್ಯಾಸವು ಮುಖ್ಯವಾಗಿ ಮಾನಸಿಕ ವ್ಯತ್ಯಾಸ ಮತ್ತು ಜನನಾಂಗ ಮತ್ತು ಸಂತಾನೋತ್ಪತ್ತಿಯ। ಸಾಮರ್ಥ್ಯಗಳಾಧಾರದ ಮೇಲೆ ಗುರ್ತಿಸಲಾಗಿದೆ. ಲಿಂಗ ಸ್ತರವಿನ್ಯಾಸವು ಒಂದು ಕಡೆಯಾದರೆ, ಸಂಸ್ಕೃತಿಯಾಧಾರ ನಿರ್ದಿಷ್ಟವಾದ ವರ್ತನೆಯು (Masculinity and Feminity).... Giddens : 2001 -109 ಕೆಲವು ಸಮಾಜಶಾಸ್ತ್ರಜ್ಞರ ದೃಷ್ಟಿಕೋನದಲ್ಲಿ ಲಿಂಗ ಮತ್ತು ಸ್ತ್ರೀ ಪುರುಷ ಮತ್ತು ಇವುಗಳು ಸಾಮಾಜಿಕವಾಗಿ ಉತ್ಪನ್ನ ಗಳಾಗಿವೆ. ಗಿಡ್ಡಿನ್ಸ್‌ರವರ ಲಿಂಗ ಮತ್ತು ಸಮಾನತೆಗೆ ಅವಲೋಕನದಂತೆ

ಲಿಂಗವು ಸಾಮಾಜಿಕವಾಗಿ ಸೃಷ್ಟಿಯಾದ್ದಂತಹ ಕಲ್ಪನೆಯಾಗಿದೆ. ಇದು ಮುಖ್ಯವಾಗಿ ಸಾಮಾಜಿಕ ಪಾತ್ರ ಮತ್ತು ಪುರುಷ ಮಹಿಳೆಯರಿಗೆ ಕೊಟ್ಟಂತಹ ವಿಶೇಷಣವಾಗಿದೆ.

ಲಿಂಗ ತಾರತಮ್ಯತೆಯು ಎಲ್ಲಾ ಸಮಾಜಗಳಲ್ಲಿ ಕಂಡುಬರುವಂತಹ ಲಿಂಗವು ಸಾಮಾಜಿಕ ಸ್ತರವಿನ್ಯಾಸದ ಒಂದುಪ್ರಮುಖವಾದ್ದಂತಹ ರೂಪವಾಗಿದೆ. ಲಿಂಗವು ಒಂದು ಪಿಮರ್ಶಾತ್ಮಕ ಅಂಶವಾಗಿದೆ. ಸಾಮಾಜಿಕ ಅವಕಾಶ ಮತ್ತು ಜೀವನಕಾವಕಾಶವನ್ನು ರೂಪಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುವುದು. ಸಾಮಾಜಿಕ ಸಂಸ್ಥೆಗಳಲ್ಲಿ ಪ್ರಮುಖ ಪಾತ್ರವನ್ನು ವಹಿಸುವುದು. ಅದಾಗ್ಯೂ ಪ್ರತಿಯೊಂದು ಸಂಸ್ಕೃತಿಯಿಂದ ಸಂಸ್ಕೃತಿಗೆ ವಿಭಿನ್ನ ವ್ಯತ್ಯಾಸಗಳನ್ನು ಪುರುಷ -ಮಹಿಳೆಯರಲ್ಲಿ ಕಾಣಬಹುದಾಗಿದೆ. ಪುರುಷರಿಗಿಂತ ಮಹಿಳೆಯರು ಹೆಚ್ಚು ಬಲಶಾಲಿಯಾಗಿರುವುದು ಸಮಾಜದಲ್ಲಿ ಹೆಚ್ಚು ಉದಾಹರಣೆಗಳು. ಪುರುಷರ ಪಾತ್ರವು ಸಾಮಾನ್ಯವಾಗಿ ಸ್ತ್ರೀಯರ ಹೆಚ್ಚು ಪ್ರತಿಫಲದಾಯಕವಾಗಿರುವುದನ್ನು ಕಾಣಬಹುದು. ಪ್ರತಿಯೊಂದು ಸಂಸ್ಕೃತಿ, ಸ್ತ್ರೀಯರು ಪ್ರಾಥಮಿಕ ಜವಾಬ್ದಾರಿಯು ಮಕ್ಕಳನ್ನು ಪಡೆಯುವುದು, ಗೃಹಕೃತ್ಯ ಕೆಲಸ, ಪುರುಷರನ್ನು ಕುಟುಂಬದ ನಿರ್ವಹಣೆಯನ್ನು ಮಾಡುವ ಜವಾಬ್ದಾರಿಯನ್ನು ಸಂಪ್ರದಾಯಿಕ ಕಾಣಬಹುದಾಗಾಗಿದೆ. ಇದು ಲಿಂಗತಾರತಮ್ಯತೆಯೂ ಕಾಣಬಹುದಾಗಿದೆ. ಪುರುಷ - ಸ್ತ್ರೀಯರು ಶಕ್ತಿ - ಅಂತಸ್ತು -ಸಂಪತ್ತುಗಳಲ್ಲಿ ಅಸಮಾನತೆಯನ್ನು ಪಡೆಯುತ್ತಿರುವುದನ್ನು ಕಾಣಬಹುದಾಗಿದೆ.

ಲಿಂಗ ಮತ್ತು ಸ್ತ್ರೀ ಪುರುಷ ಸ್ತರವಿನ್ಯಾಸವು Homosapiens ರ ಇತಿಹಾಸವನ್ನು ಹುಡುಕುವ ಪ್ರಯತ್ನ ಮಾಡಿದ್ದಾರೆ.

ಫ್ರೆಡರಿಕ್ ಏಂಗಲ್ಸ್ (೧೮೮೦)ರವರು The origin of the family : Private Property and the state ಈ ಗ್ರಂಥದಲ್ಲಿ ಹುಡುಕುವ ಪ್ರಯತ್ನವನ್ನು ಮಾಡಿದ್ದಾರೆ. ಇವರ ಪ್ರಕಾರ 'ಲೈಂಗಿಕ ಸ್ತ್ರೀ' ಚಾರಿತ್ರಿಕವಾಗಿ defeat ಯಾಗಿದೆ. ಇವರ ಪ್ರಕಾರ Mode of approtions ಬದಲಾವಣೆಯಾದಾಗಲೇ ಸ್ತ್ರೀ ಶಕ್ತಿಯನ್ನು ಕಳೆದುಕೊಂಡಳು. ಉತ್ಪಾದನೆಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುವುದಾದರೆ ಸಲಕರಣೆಯಲ್ಲಿ ಆಹಾರ, ಸರಕುಗಳ ವಿನಿಮಯ ಬದಲಾವಣೆಯಾಗಿಲ್ಲ. ಜೀವಿಗಳಿಗೆ ಜನ್ಮ ನೀಡುವುದು ಮತ್ತು ಬೆಳೆಸುವುದು.

ಎಲ್ಲಾ ಸಮಾಜಗಳಲ್ಲಿ ಪುರುಷ ಮೇಲು ಅಂತಸ್ತು ಮತ್ತು ಸ್ತ್ರೀಯರು ಕೆಳಅಂತಸ್ತನ್ನು ಪಡೆದಿದ್ದರು. ನಂತರದಲ್ಲಿ ಸ್ತ್ರೀವಾದಿಗಳ ಚರ್ಚೆಯನ್ನು ಕಾಣಬಹುದಾಗಿದೆ.

ಸ್ತ್ರೀವಾದ ಎಂದರೆ ಒಂದು ತಾತ್ವಿಕ ಚಿಂತನೆ. ಈ ಪದವು ೧೮ನೇ ಶತಮಾನದಲ್ಲಿ ಮೊದಲಬಾರಿಗೆ ಬಳಕೆಯಾಯಿತು. ಸ್ತ್ರೀವಾದ ಎಂದರೆ ಮೂಲಭೂತವಾಗಿ ಸಮಾಜದಲ್ಲಿನ ಸ್ತ್ರೀಶೋಷಣೆ ಹಾಗೂ ಧರ್ಮವನ್ನು ಕುರಿತ ಪ್ರಜ್ಞಾಪೂರ್ವಕ ಎಚ್ಚರ. ಅಂದರೆ ಹಳೆಯ ಖಾಯಿಲೆಗಳೊಂದಿಗೆ ಸ್ನೇಹದಿಂದ ಬಗ್ಗಿಹೋಗಿ ಬದುಕುವ ಕಲೆಯನ್ನು ಮಹಿಳೆಯು ಚೆನ್ನಾಗಿಯೇ ಕಲಿತಿದ್ದಾಳೆ. ಎಷ್ಟರ ಮಟ್ಟಿಗೆ ತನಗೆ ರೋಗ ಇರುವುದೇ ಗೊತ್ತಿಲ್ಲದಷ್ಟು ನೀಗಿಕೊಳ್ಳಬೇಕಾದ ರೋಗಗ್ರಸ್ತ ಅಸಹಜ ಸ್ಥಿತಿಯನ್ನು ಹೊಸ ಎಚ್ಚರದಿಂದ ನೋಡಿ ಗುರುತಿಸಿಕೊಳ್ಳುವ ಪ್ರಕ್ರಿಯೆ ಮಹಿಳೆಯ ಮಟ್ಟಿಗೆ ಮಹತ್ವದ್ದು. ಈ ರೋಗ ನಿಧಾನದ ಕಾರ್ಯವನ್ನು ಸ್ತ್ರೀವಾದ ಮಾಡುತ್ತದೆ. ಅಂದರೆ ಕುಟುಂಬದಾಚೆನ ಪರಿಸರದಲ್ಲಿ ನಡೆಯುವ ಸ್ತ್ರೀ ಶೋಷಣೆಯ ಸಿದ್ಧ ಸ್ಥಿತಿಯನ್ನು ಕದಲಿಸುವ ಪ್ರಯತ್ನಗಳಿಗೆ ಚೈತನ್ಯವನ್ನು ಸ್ತ್ರೀವಾದ ನೀಡಿದೆ. ಸ್ತ್ರೀಯನ್ನು ಕುರಿತ ಗ್ರಹಿಕ, ವಿವರಣೆ, ವಿಶ್ಲೇಷಣೆ, ಪುನರ್ ಮೌಲ್ಯೀಕರಣ ಪ್ರಯತ್ನಕ್ಕೆ ಸೂಕ್ತವಾದ ತಾತ್ವಿಕತೆಯನ್ನು ಕಟ್ಟಿಕೊಳ್ಳುವ ಪ್ರಕ್ರಿಯೆಯೇ ಸ್ತ್ರೀವಾದ. ಈ ನಿಟ್ಟಿನಲ್ಲಿ ಮಹಿಳೆಯ ಬಗೆಗಿನ ಪುರುಷ ನಿರ್ಮಿತಸಿದ್ಧ ತಾತ್ವಿಕ ಎದುರಾಗಿ ಇಟ್ಟುಕೊಂಡೇ ಸ್ತ್ರೀವಾದ ವ್ಯವಹರಿಸುತ್ತಾನೆ.

ಚೀನಾದ ಖ್ಯಾತ ಕನ್‌ಫ್ಯೂಶಿಯಸ್ ನಂಬಿದ್ದ ಹೆಣ್ಣೆಂದರೆ ಆ ಪರಿಪೂರ್ಣ ಗಂಡ. ಸೆಂಟ್‌ಥಾಮಸ್ ನ ಹೆಣ್ಣಿನ ಕುರಿತ ವ್ಯಾಖ್ಯೆ. ಸಹಜದೋಷಗಳೊಂದಿಗೆ ಕೆಲವು ಗುಣಗಳ ಕುರಿತು ಇರುವುದರಿಂದ ಹೆಣ್ಣು ಹೆಣ್ಣಾಗಿದ್ದಾಳೆ ಎಂದು ಅರಿಸ್ಟಾಟಲ್ ಹೇಳುತ್ತಾನೆ. ಇಂತಹ ವಿಚಾರಗಳಿಗೆ ಸ್ತ್ರೀವಾದ ಕೇವಲ ಪ್ರತಿಕ್ರಿಯಿಸುವುದಿಲ್ಲ. ಇದು ಸಾಮೂಹಿಕ ಹೋರಾಟದಲ್ಲಿ ತೊಡಗಬೇಕಾದಾಗ ಅನಿವಾರ್ಯತೆಯನ್ನು ಗುರುತಿಸಿಕೊಳ್ಳುತ್ತದೆ.

ಸ್ತ್ರೀವಾದವು ದೈವಿಕತೆಯ ಮೇಲೆ ಕಟ್ಟಿದ ಕೃತಕ ಮಾದರಿಗಳನ್ನು ಪ್ರಶ್ನಿಸುವುದೇ ಸ್ತ್ರೀವಾದ. ಅಂದರೆ ಎಲ್ಲಾ ಜೀವವರ್ಗಕ್ಕೆ ಅನ್ವಯವಾಗುವ ದೈವಿಕ ಸ್ಥಿತಿಯಾಗಿದೆ. ಆದರೆ ಈ ಜೈವಿಕ ಸ್ವರೂಪಕ್ಕೂ ವ್ಯಕ್ತಿತ್ವದ ಗುಣ ಅವಗುಣಗಳಿಗೂ ಸಂಬಂಧ ಕಲ್ಪಿಸುವಲ್ಲಿ ಏಕಪ್ರಕ್ರಿಯೆಯಲ್ಲಿ ನಿಲುವಿದೆ. ಧೈರ್ಯ, ಶೌರ್ಯ, ಮತ್ತು ಆಕ್ರಮಣಶೀಲತೆ ವೈಚಾರಿಕತೆ ಮುಂತಾದವನ್ನು ಗಂಡುಗುಣಗಳೆಂದು ಭಯ ಮಾರ್ದವತೆ ಸಹನೆ ಭಾವನಾತ್ಮಕ ಮುಂತಾದವುಗಳನ್ನು ಹೆಣ್ಣು ಗುಣಗಳೆಂದೂ ಕರೆಯಲಾಗುತ್ತಿದೆ. ಇದರ ಆಧಾರದ ಮೇಲೆ ಪುರುಷ ಪ್ರಧಾನ ಸಂಸ್ಕೃತಿಯ ಆವರಣಗಳ ಸೃಷ್ಟಿಯ ಮೂಲಕವೇ ತನ್ನ

ಚಿಂತನಾಕ್ರಮವನ್ನು ರೂಪಿಸಿಕೊಂಡಿದೆ. ದೈವಿಕತೆಯ ಮೇಲೆ ಕಟ್ಟಿದ ಇಂಥ ಕೃತಕ ಮಾದರಿಗಳನ್ನು ಪ್ರಶ್ನಿಸುವುದೇ ಸ್ತ್ರೀವಾದ.

ಸ್ತ್ರೀವಾದಿ ಚಿಂತನೆಯನ್ನು ಬೆಳವಣಿಗೆಯನ್ನು ಅರಿಯುವುದಕ್ಕೆ ಸಹಾಯಕವಾಗುವ ಪ್ರಮುಖ ಸಿದ್ಧಾಂತಗಳೆಂದರೆ ಮಾರ್ಕ್ಸ್‌ವಾದ/ ಮನೋವಿಶ್ಲೇಷಣೆ.

**ಮಾರ್ಕ್ಸ್‌ವಾದ :** ಮಹಿಳೆಯರನ್ನು ಹತ್ತಿಕ್ಕಲ್ಪಟ್ಟ ಸಾಮಾಜಿಕ ವರ್ಗವೆಂದು ಭಾವಿಸುತ್ತದೆ. ಮಹಿಳೆಯರ ದಮನಕ್ಕೂ ವರ್ಗದ ದಮನಕ್ಕೂ ಇರುವ ಸಂಬಂಧವನ್ನು ಮಾರ್ಕ್ಸ್‌ವಾದ ಪ್ರಶ್ನಿಸುತ್ತದೆ. ಉದಾರತಾವಾದಿ ಸಮಾನತಾವಾದಗಳಂತಹ ತತ್ವಗಳ ಮರೆಯಲ್ಲಿ ಸಾಮಾಜಿಕ ಅಸಮಾನತೆಯನ್ನು ಸಮರ್ಥಿಸುವ ಸ್ವೀಕರಿಸುವ ಪ್ರಯತ್ನಕ್ಕೆ ಮಾರ್ಕ್ಸ್‌ವಾದ ಪತ್ತೆಹಚ್ಚುತ್ತದೆ.

೧೯೪೯ರಲ್ಲಿ ಸಿಮನ್ ದಿ ಬೊವಾಳ 'The Second Sex'ಪ್ರಕಟವಾಯಿತು. ಮಹಿಳೆಯರ ಹಕ್ಕು ಬಾಧ್ಯತೆಗಳನ್ನು ಸಮರ್ಥಿಸುವ ಪ್ರಯತ್ನದಲ್ಲಿ ಆಕೆ ಮೊದಲಿಗಳು.[4]

**ಬೊವಾಳ ಪ್ರಕಾರ** ತನ್ನದೇ ಆದ ಕಲಾಜೀವನ ರೂಪಿಸಿಕೊಳ್ಳಲು ಮಹಿಳೆಗೆ ಭೌತಿಕ ಹಾಗೂ ಬೌದ್ಧಿಕ ಸಂಪನ್ಮೂಲಗಳ ಅಗತ್ಯವಿದೆ. ಆದರೆ ಪಿತೃ ಪ್ರಾಧಾನ್ಯವು ತನಗೆ ಅನುಕೂಲಕರವಾದ ಸಾಮಾಜಿಕ, ಆರ್ಥಿಕ, ತಾತ್ವಿಕ ರಚನೆಗಳನ್ನು ಸ್ಥಾಪಿಸಿಕೊಂಡಿದ್ದು. ಮಹಿಳೆಗೆ ದಕ್ಕಬೇಕಾದ ಗಟ್ಟಿಯಾದ ಸಂಪನ್ಮೂಲಗಳು ಆಕೆಗೆ ಸಿಗದ ಹಾಗೆ ನೋಡಿಕೊಂಡಿವೆ.

ಹೀಗೆ ಬೊವಾಳ ಪಿತೃಪ್ರಧಾನ ನೆಲೆಯ ಕಲಕಲಾವಿದರ ವಿವರಣೆಯನ್ನು ನೀಡುತ್ತಾಳೆ. ಈ ರೀತಿಯಾದ ವಿವರಣೆಯನ್ನು 'The Second Sex' ಎಂಬ ಗ್ರಂಥದಲ್ಲಿ ತಿಳಿಸಿದ್ದಾರೆ.

ಮಾರ್ಕ್ಸ್‌ವಾದಿ ಸ್ತ್ರೀವಾದ : ಆಂಗ್ಲ-ಅಮೇರಿಕ ಮತ್ತು ಐರೋಪ್ಯ ದೇಶಗಳ ಉದಾರಮಾನವತಾವಾದಿ ಚಿಂತನೆಯ ಮೂಲದ ಸ್ತ್ರೀವಾದವು ವಿಚಾರ ಮೂಲಸಿದ್ಧಾಂತ ನೆಲೆಯಿಂದ ರೂಪುಗೊಂಡಿದೆ. ವ್ಯಕ್ತಿಯ ಮನಸ್ಸು ಮತ್ತು ಲೈಂಗಿಕತೆಯ ವಿಶ್ಲೇಷಣೆಯೇ ಉದಾರವಾದಿ ಸ್ತ್ರೀವಾದದ ತಾತ್ವಿಕ ಹಿನ್ನಲೆಗಿದ್ದು ಸಂಸಾರದ ಪ್ರಭಾವವನ್ನು ನಿರ್ಲಕ್ಷಿಸಲಾಯಿತು. ಇಲ್ಲಿ ಕುಟುಂಬದೊಳಗಿನ ಮಹಿಳೆಯ ಆರ್ಥಿಕ, ಭೌತಿಕ ಶೋಷಣೆಯನ್ನೇ ವರ್ಗ ಸಮಾಜಕ್ಕೂ ವಿಸ್ತರಿಸಿ

ತಮ್ಮ ಸಾಮಾಜಿಕ ಚಿಂತನೆಗಳನ್ನು ಮಾರ್ಕ್ಸ್ ಮತ್ತು ಲಿಂಗಾಧಾರಿ ಶ್ರಮವಿಭಜನೆಯ ಸಿದ್ಧಾಂತವನ್ನಾಧರಿಸಿ ಸ್ತ್ರೀ ಪುರುಷರೊಳಗಿನ ಸಾಮಾಜಿಕ ಅಸಮಾನತೆಯ ಸ್ವರೂಪವನನ್ನು ಪ್ರಧಾವಾಗಿ ಮಾರ್ಕ್ಸ್‌ವಾದಿ ಸ್ತ್ರೀವಾದಿ ವಿಶ್ಲೇಷಿಸಿದ್ದಾರೆ.

## 2.1 ಶಿಕ್ಷಣದ ಐತಿಹಾಸಿಕ ಹಿನ್ನೆಲೆ

ಭಾರತದಲ್ಲಿ ಶಿಕ್ಷಣಕ್ಕೆ ಸುದೀರ್ಘವಾದ ಇತಿಹಾಸವಿದೆ. ಇದರ ಇತಿಹಾಸವನ್ನು ೩. ಹಂತಗಳಲ್ಲಿ ಕಾಣಬಹುದಾಗಿದೆ.

1. ಪುರಾತನ ಕಾಲದ ಶಿಕ್ಷಣ
2. ಮಧ್ಯಯುಗದ ಶಿಕ್ಷಣ
3. ಆಧುನಿಕ ಕಾಲದ ಶಿಕ್ಷಣ

### 2.1.1 ಪುರಾತನ ಕಾಲದಲ್ಲಿ ಶಿಕ್ಷಣ

'ಶಿಕ್ಷಣ'ವು ಒಂದು ವಿಶೇಷ ಸಂಸ್ಥೆಯ ಜೋಡಣೆಯಾಗಿದೆ. ಪುರಾತನಕಾಲದಿಂದಲೂ ಅಸ್ತಿತ್ವದಲ್ಲಿತ್ತು. ಭಾರತೀಯ ಸಮಾಜದ ಎಲ್ಲಾ ಮುಖಗಳ ಮೇಲೆ ಧರ್ಮದ ಪ್ರಭಾವವಿತ್ತು. ಹೀಗಾಗಿ ಶಿಕ್ಷಣವು ಧರ್ಮಕ್ಕಾಗಿಯೇ ಅಸ್ತಿತ್ವದಲ್ಲಿತ್ತೆಂದು ವ್ಯಕ್ತವಾಗುತ್ತದೆ. ಶಿಕ್ಷಣವನ್ನು ಮೋಕ್ಷ ಅಥವಾ ಸ್ವಯಂಜ್ಞಾನಕ್ಕಾಗಿ ಬಳಸಲಾಗುತ್ತಿತ್ತು ಅಂದರೆ ಶಿಕ್ಷಣದ ಮುಖ್ಯಗುರಿ ಮುಕ್ತಿಯನ್ನು ಪಡೆಯುವುದಾಗಿತ್ತು. ವೇದಗಳ ಕಾಲದಲ್ಲಿ ಶಿಕ್ಷಣವನ್ನು 'ಪ್ರಕಾಶಮಾನ' ಅಥವಾ 'ಜ್ಞಾನ' ಎಂಬ ಅರ್ಥದಲ್ಲಿ ಬಳಸಲಾಗುತ್ತಿತ್ತು. ಶಿಕ್ಷಣವು ಮಾನವನ ೩.ನೇ ಕಣ್ಣಿದ್ದಂತೆ. ಇದು ಎಲ್ಲಾ ವ್ಯವಹಾರಗಳಲ್ಲಿ ಒಳನೋಟಗಳನ್ನು ಒದಗಿಸುತ್ತೆಂದು ಧಾರ್ಮಿಕ ಕ್ಷೇತ್ರದಲ್ಲಿ ಸರಿಯಾಗಿ ನಡೆಯುವಂತೆ ಹೇಳುತ್ತದೆಂದು ಭಾವಿಸಲಾಗುತ್ತಿತ್ತು. ಪುರಾತನಕಾಲದಲ್ಲಿ ಅಸ್ತಿತ್ವದಲ್ಲಿದ್ದ ೩ ಶಿಕ್ಷಣ ಸಂಸ್ಥೆಗಳೆಂದರೆ 1) ಗುರುಕುಲ, 2) ಪರಿಷತ್ 3) ಸಮ್ಮೇಳನ. ಇಷ್ಟೇ ಅಲ್ಲದೆ ಆಶ್ರಮಗಳು ಕೂಡ ಅಸ್ತಿತ್ವದಲ್ಲಿತ್ತು. ಆಶ್ರಮದ ಮುಖ್ಯಸ್ಥನನ್ನು ಗುರು ಅಥವಾ ಆಚಾರ್ಯ ಎಂದು ಕರೆಯಲಾಗುತ್ತಿತ್ತು. ಈ ಸಂಸ್ಥೆಗಳಲ್ಲಿ ಜ್ಞಾನದ ನಿರ್ವಾಚನ, ವ್ಯಾಕರಣ ಮುಂತಾದವುಗಳನ್ನು ಕಲಿಸಲಾಗುತ್ತಿತ್ತು.

ಭಾರತೀಯ ಸಮಾಜವು ಪುರಾತನ ಕಾಲದಿಂದಲೂ ಜಾತಿ ವ್ಯವಸ್ಥೆಯಿಂದ ಸ್ತರವಿನ್ಯಾಸಗೊಂಡಿದೆ. ಜಾತಿಯು ವ್ಯಕ್ತಿಯ ಎಲ್ಲಾ ಮುಖಗಳನ್ನು ನಿರ್ಧರಿಸುತ್ತಿತ್ತು. ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ರಾಜಕೀಯ ಇತ್ಯಾದಿ ಈ ಕಾರಣದಿಂದ ಶಿಕ್ಷಣವನ್ನು ಪಡೆಯತಕ್ಕಂತಹ ಹಕ್ಕು ಕೇವಲ ಮೇಲುಜಾತಿಯವರಿಗೆ ಮಾತ್ರ ಸೀಮಿತವಾಗಿತ್ತು.

ಶ್ರೇಣೀಕೃತ ಹಿಂದು ಸಮಾಜದಲ್ಲಿ ಉನ್ನತ ಸ್ಥಾನವನ್ನು ಹೊಂದಿದ ಬ್ರಾಹ್ಮಣರಿಗೆ ಮಾತ್ರ ಧಾರ್ಮಿಕ ತತ್ವಗಳನ್ನು ಬೋಧಿಸುವ ವಿಶೇಷ ಹಕ್ಕುಗಳನ್ನು ನೀಡಲಾಗುತ್ತಿತ್ತು. ಹೀಗೆ ಬ್ರಾಹ್ಮಣರು ಪುರೋಹಿತರಾಗಿಯೂ ಮತ್ತು ಉಪಾಧ್ಯಾಯರಾಗಿಯೂ ಕಾರ್ಯನಿರ್ವಹಿಸುತ್ತಿದ್ದರೂ ಇವರ ನಂತರ ಕ್ಷತ್ರಿಯರಿಗೆ ಸೈನಿಕ ಕಲೆಗಳನ್ನು ಬೋಧಿಸಲಾಗುತ್ತಿತ್ತು. ಅಲ್ಲದೆ ಸೈನಿಕ ತಂತ್ರಗಳ ತರಬೇತಿಯನ್ನು ನೀಡಲಾಗುತ್ತಿತ್ತು. ಅಲ್ಲದೆ ವೈಶ್ಯರಿಗೆ ವ್ಯವಹಾರಿಕ ಜ್ಞಾನಕ್ಕೆ ಬೇಕಾಗಿದ್ದ ಓದು ಬರಹ ಮತ್ತು ಸರಳ ಅಂಕಗಣಿತವನ್ನು ಹೇಳಿಕೊಡಲಾಗುತ್ತಿತ್ತು. ಆದರೆ ಉಳಿದ ಜಾತಿಗಳು ಧಾರ್ಮಿಕ ಅನುಮತಿಯ ಮುಖಾಂತರ ಶಿಕ್ಷಣದಿಂದ ವಂಚಿತರಾಗಿ ಮಾಡಲಾಗುತ್ತಿತ್ತು. ಪರಿಶಿಷ್ಟ ಜಾತಿಯವರು ಅಸ್ಪೃಶ್ಯರಿಗೆ ಮತ್ತು ಮಲಿನತೆಯ ಕಳಂಕವನ್ನು ಹೊಂದಿದ್ದರಿಂದ ಅವರನ್ನು ಸಮಾಜದ ಹೊರಗೆ ಇಡಲಾಗಿತ್ತು. ಅವರ ಕಡು ಬಡತನ ಅಧಿಕಾರ ರಹಿತತೆಯು, ಮುಂತಾದವು ಅವರನ್ನು ಶಿಕ್ಷಣದಿಂದ ವಂಚಿತರಾಗಿ ಮಾಡಿದ್ದವು. ಇಷ್ಟೇ ಅಲ್ಲದೆ ಬೋಧನಾ ಮಾಧ್ಯಮವು ಸಂಸ್ಕೃತ ಭಾಷೆಯಾಗಿತ್ತು. ಇದು ಮೇಲುವರ್ಗದ ಉಚ್ಛ ಜಾತಿಗೆ ಅನುಕೂಲಕರವಾಗಿತ್ತು. ಹೀಗೆ ಪರಿಶಿಷ್ಟ ಜಾತಿಯವರಲ್ಲಿ ಅನಕ್ಷರತೆಯ ಬಡತನ, ಪುರಾತನ ಕಾಲದಿಂದ ಪ್ರಾರಂಭವಾಗಿ ೧೯ನೇ ಶತಮಾನದ ಕೊನೆಯವರೆಗೂ ಆಚರಣೆಯಲ್ಲಿತ್ತು. ಇಷ್ಟೇ ಅಲ್ಲದೆ ಆಗಿನ ಕಾಲದಲ್ಲಿ ಅನೇಕ ಆಶ್ರಮಗಳನ್ನು ಒಳಗೊಂಡ ಅನೇಕ ಸಂಸ್ಥೆಗಳು ಅಸ್ತಿತ್ವದಲ್ಲಿದ್ದವು. ಇವುಗಳಿಗೆ 'ಚರಣ'ಗಳೆಂದು ಕರೆಯಲಾಗುತ್ತಿತ್ತು. 'ಚರಣ'ಗಳನ್ನು ಅನೇಕ ದೊಡ್ಡ ಘಟಕಗಳಾಗಿ ಒಟ್ಟುಗೂಡಿಸಿ ಅವುಗಳನ್ನು ಪರಿಷತ್‌ಗಳೆಂದು ಕರೆಯುತ್ತಾರೆ. ಇಂತಹ ಪರಿಷತ್‌ಗಳು ಆಗಿನ ಕಾಲದ ವಿಶ್ವವಿದ್ಯಾಲಯಗಳಾಗಿದ್ದವು. ಈ ವಿಶ್ವವಿದ್ಯಾನಿಲಯಗಳು ವಾರಣಾಸಿ, ನೈಬಿಷಯಾರಣ್ಯ (ಉತ್ತರಭಾರತದಲ್ಲಿ) ಮತ್ತು ಮಧುರೈ, ಕಾಂಜೀವರಂ ಮುಂತಾದ ಸ್ಥಳಗಳಲ್ಲಿ ಸ್ಥಾಪಿಸಲಾಯಿತು. ಇಂತಹ ಉನ್ನತಶಿಕ್ಷಣಗಳಲ್ಲಿ ಓದುವ ಅವಕಾಶ ಕೇವಲ ಮೇಲ್ಜಾತಿಯವರಿಗೆ ಅದರಲ್ಲೂ ಬ್ರಾಹ್ಮಣರಿಗೆ, ಕ್ಷತ್ರಿಯರಿಗೆ, ವ್ಯಾಪಾರ ಸಮುದಾಯದವರಿಗೂ ನೀಡಿದ್ದಾರೆ. ಆದರೆ ಶ್ರೇಣೀಕೃತ ತಳ ಸಮೂಹದ ಶೂದ್ರರಿಗೆ ಇಂತಹ ಶೈಕ್ಷಣಿಕ ಅವಕಾಶಗಳಿಂದ ವಂಚಿಸಲ್ಪಡಲಾಗಿತ್ತು.

### 2.1.2 ಮಧ್ಯಯುಗದ ಕಾಲದಲ್ಲಿ ಶಿಕ್ಷಣ

#### ಬೌದ್ಧ ಧರ್ಮದ ಕಾಲದಲ್ಲಿ ಶಿಕ್ಷಣ

ಬೌದ್ಧಕಾಲದಲ್ಲಿ ಸಂಘಟನೆಗೊಂಡ ಶಿಕ್ಷಣ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು. ಇವುಗಳು ಬೌದ್ಧ ಧರ್ಮದ ಅನುಯಾಯಿಗಳಿಗೆ ಮಾತ್ರ ಶಿಕ್ಷಣದ ಅವಕಾಶವನ್ನು ನೀಡಿದ್ದವು. ಈ ಕಾಲದಲ್ಲಿ ಅನೇಕ ವಿದ್ಯಾಸಂಸ್ಥೆಗಳು ಪಾಳಿ ಮತ್ತು ಸಂಸ್ಕೃತವನ್ನು ಪ್ರಾಥಮಿಕ ಮತ್ತು ಉನ್ನತ ಶಿಕ್ಷಣದಲ್ಲಿ ಬೋಧನಾ ಮಾಧ್ಯಮವಾಗಿ ಬಳಸಲಾಗುತ್ತಿತ್ತು. ದೊಡ್ಡ ಬೌದ್ಧ ವಿಹಾರಗಳಲ್ಲಿ ಸನ್ಯಾಸಿಗಳಿಗೆ, ಸನ್ಯಾಸಿನಿಯರಿಗೆ ಮತ್ತು ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ನೀಡಲಾಗುತ್ತಿತ್ತು. ಇಂತಹ ಕೆಲವು ಸಂಸ್ಥೆಗಳು ವಿಶ್ವವಿದ್ಯಾನಿಲಯದ ಸ್ಥಾನವನ್ನು ಪಡೆದುಕೊಂಡಿದ್ದವು. (ಸಕ್ಸೇನಾ 1967 : 87) ಉದಾಹರಣೆಗೆ, ನಳಂದ, ತಕ್ಷಶಿಲಾ ಮುಂತಾದವುಗಳು ಈ ಬೌದ್ಧರ ಕಾಲದಲ್ಲೂ ಕೂಡ ಪರಿಶಿಷ್ಟ ಜಾತಿಯವರಿಗೆ ಶಿಕ್ಷಣದಿಂದ ವಂಚಿಸಲಾಯಿತು. ಇದಕ್ಕೆ ಮುಖ್ಯ ಕಾರಣ ಅವರ ಮಲಿನತೆ ಕಳಂಕ, ಸಂಸ್ಕಾರದಲ್ಲಿ ಅತ್ಯಂತ ಕೆಳದರ್ಜೆಯ ವೃತ್ತಿಗಳು, ಭಿನ್ನವಾದ ಸಾಂಸ್ಕೃತಿಕ ಲಕ್ಷಣಗಳು, ಅಂದರೆ ಬುಡಕಟ್ಟಿನ ಹಿನ್ನೆಲೆ, ಪರಕೀಯ ಭಾಷೆ, ವಿಚಿತ್ರವಾದ ಬದುಕಿನ ಕ್ರಮಗಳು ಮುಂತಾದವುಗಳು ಅವರನ್ನು ಹೊಸಧರ್ಮವನ್ನು ಸೇರಲು ಅಡ್ಡಿಪಡಿಸಿದ್ದವು. ಅದೇ ರೀತಿ ಶಿಕ್ಷಣದಿಂದ ವಂಚಿಸಲ್ಪಟ್ಟವು.[5]

#### ಮುಸ್ಲಿಂ ಕಾಲದಲ್ಲಿ ಶಿಕ್ಷಣ

10ನೇ ಶತಮಾನದಲ್ಲಿ ಮುಸ್ಲಿಂರ ಆಳ್ವಿಕೆಯು ಅಸ್ತಿತ್ವಕ್ಕೆ ಬಂದಿತ್ತು. ಮುಸ್ಲಿಂ ರ ಶೈಕ್ಷಣಿಕ ಸಂಸ್ಥೆಗಳನ್ನು ಮತಾಬ್ ಮತ್ತು ಮದರಸ ಎಂದು ಕರೆಯುತ್ತಿದ್ದರು. ಪ್ರಾಥಮಿಕ ಶಿಕ್ಷಣವನ್ನು ಮತಾಬ್‌ಗಳು ನೀಡಿದ್ದರೆ ಉನ್ನತ ಶಿಕ್ಷಣವನ್ನು ಮದರಸಗಳು ನೀಡಿದ್ದವು. ಈ ಸಂಸ್ಥೆಗಳಲ್ಲಿಯೂ ಕೂಡ ಪರಿಶಿಷ್ಟ ಜಾತಿಯವರಿಗೆ ಯಾವ ಶಿಕ್ಷಣದ ಅವಕಾಶಗಳು ಇರಲಿಲ್ಲ.

#### ವಿಜಯನಗರದ ಅರಸರ ಕಾಲದಲ್ಲಿ ಶಿಕ್ಷಣ

ದಕ್ಷಿಣ ಭಾರತದಲ್ಲಿ ಉಚ್ಛ್ರಾಯಾ ಸ್ಥಿತಿ ಕಂಡ ವಿಜಯನಗರದ ಸಂತತಿಯ ಕಾಲದಲ್ಲೂ ಕೂಡ ಪರಿಶಿಷ್ಟ ಜಾತಿಯವರಿಗೆ ಮಧ್ಯಯುಗಕಾಲದಲ್ಲಿ ಅಸ್ತಿತ್ವದಲ್ಲಿದ್ದ ಶಿಕ್ಷಣ ಸಂಸ್ಥೆಗಳನ್ನು ೩ ಭಾಗಗಳಾಗಿ ವಿಂಗಡಿಸಲಾಗಿದೆ.

1) ಅಗ್ರಹಾರಗಳು 2) ಬ್ರಹ್ಮಪುರಿಗಳು 3) ಘಟಕಗಳು. ಇಂತಹ ಶಿಕ್ಷಣ ಸಂಸ್ಥೆಗಳು ಮೇಲುಜಾತಿಯವರಿಗೂ ಜಾತಿಯ ಏಣಿಶ್ರೇಣಿಯ ಮಧ್ಯಭಾಗದಲ್ಲಿ ಕೆಲವು ಜಾತಿಗಳಿಗೆ ಶಿಕ್ಷಣ ದೊರೆಯುತ್ತಿತ್ತು. ಮಠಗಳು, ದೇವಸ್ಥಾನಗಳು, ಶೈಕ್ಷಣಿಕ ಕೇಂದ್ರಗಳಾಗಿ ಕೆಲಸ ಮಾಡುತ್ತಿದ್ದವು. ಆದರೆ ಇಲ್ಲೂ ಕೂಡ ಪರಿಶಿಷ್ಟ ಜಾತಿಯವರಿಗೆ ಯಾವ ರೀತಿಯ ಪ್ರವೇಶಾವಕಾಶಗಳು ಇರಲಿಲ್ಲ. ಬ್ರಿಟೀಷರು ಭಾರತಕ್ಕೆ ಬರುವ ಮುನ್ನ ದೇಶದ ಅನೇಕ ಭಾಗಗಳಲ್ಲಿ ಸ್ಥಳೀಯಶಾಲೆಗಳು 'ಇಂಡೋಜಿನಿಯಸ್' ಶಾಲೆಗಳು ಕಾರ್ಯನಿರ್ವಸಹಿಸುತ್ತಿದ್ದವು. ಈ ಶಾಲೆಗಳಲ್ಲಿ ಲೌಕಿಕ ವ್ಯವಹಾರಗಳಿಗೆ ಬೇಕಾಗಿರುವ ಜ್ಞಾನವನ್ನು ಅಂದರೆ ಓದುವಿಕೆ, ಬರೆಯುವಿಕೆ, ಸರಳ ಅಂಕಗಣಿತ, ಮುಂತಾದವುಗಳನ್ನು ಬೋಧಿಸುತ್ತಿದ್ದರು. ಮಲೀನತೆಯ ಕಳಂಕವನ್ನು ಹೊಂದಿದ್ದ ಪರಿಶಿಷ್ಟರಿಗೆ ಈ ತರಹದ ಶಾಲೆಗಳು ಪರಿಪೂರ್ಣವಾಗಿ ಮುಚ್ಚಿದ್ದವು.

## ಬ್ರಿಟೀಷರ ಅವಧಿಯಲ್ಲಿ

ಮಹಿಳಾ ಶಿಕ್ಷಣ ಬ್ರಿಟೀಷರ ಅವಧಿಯಲ್ಲಿ ಆಧುನಿಕ ಶಿಕ್ಷಣವನ್ನು ಹರಡುವಲ್ಲಿ ಕಂಡುಬರುವ ಮೈಲಿಗಲ್ಲುಗಳೆಂದರೆ

1. ಏಜುಕೇಷನಲ್ ಡಿಸ್‌ಪ್ಯಾಚ್ ಆಫ್ - ೧೮೫೪
2. ಹಂಟರ್ ಕಮೀಷನ್ - ೧೮೮೨-೮೩
3. ಯೂನಿವರ್ಸಿಟಿ ಕಮಿಷನ್ ೧೯೦೨
4. ಕಲ್ಕತ್ತಾದ ಯೂನಿವರ್ಸಿಟಿ ಕಮಿಷನ್ ೧೯೪೭
5 ಸಾರ್ಜಂಟ್ ರಿಪೋರ್ಟ್ ೧೯೪೪ ಇತ್ಯಾದಿಗಳು

ಈಸ್ಟ್ ಇಂಡಿಯಾ ಕಂಪೆನಿಯು ಪ್ರಾರಂಭವಾದ ದಿನಗಳಲ್ಲಿ ಮಹಿಳಾ ಶಿಕ್ಷಣಕ್ಕೆ ಯಾವುದೇ ರೀತಿಯ ಆಸಕ್ತಿಯನ್ನು ತೋರಲಿಲ್ಲ. ಕಾಲಕ್ರಮೇಣ ಕ್ರೈಸ್ತ ಮಿಷನರಿಗಳು, ಈ ದಿಸೆಯಲ್ಲಿ ಪ್ರಯತ್ನಿಸಿದ್ದರು. ಪ್ರಥಮ ಬಾರಿಗೆ ಮಹಿಳೆಯರಿಗಾಗಿ ತೆರೆದ ಶಾಲೆಯೆಂದರೆ 'ಬೆತುನ' ಶಾಲೆಯನ್ನು 1847ರಲ್ಲಿ ಈಶ್ವರ ಚಂದ್ರ ವಿದ್ಯಾಸಾಗರ ಮತ್ತು ಡ್ರಿಂಕ್ ವಾಟರ್ ಬೆತುನ ಪ್ರಾರಂಭಿಸಿದ್ದರು. 1854ರ ವೇಳೆಗೆ ಅನೇಕ ಶಾಲೆಗಳನ್ನು ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕಾಗಿ ತೆರೆಯಲಾಯಿತು. ಆಗ ಮದ್ರಾಸ್

ಪ್ರಾಂತ್ಯದ 256 ಶಾಲೆಗಳು. ಬಾಂಬೆ ಪ್ರಾಂತ್ಯ 65 ಶಾಲೆಗಳು, ಬಂಗ್ಲಾದಲ್ಲಿ 288 ಶಾಲೆಗಳು, ಈಶಾನ್ಯ ಪ್ರಾಂತ್ಯದಲ್ಲಿ 17 ಶಾಲೆಗಳು, ಹೆಣ್ಣು ಮಕ್ಕಳಿಗಾಗಿ ತೆರೆಯಲಾಯಿತು. 1882ರ ವೇಳೆಗೆ ಹೆಣ್ಣು ಮಕ್ಕಳಿಗಾಗಿ ತೆರೆದ ಶಾಲೆಗಳ ಸಂಖ್ಯೆ ಹೀಗಿದೆ. 2600 ಪ್ರಾಥಮಿಕ ಶಾಲೆಗಳು, 81 ಮಾಧ್ಯಮಿಕ ಶಾಲೆಗಳು, 15 ತರಬೇತಿ ಶಾಲೆಗಳು, 1 ಕಾಲೇಜು ತೆರೆಯಲಾಯಿತು.

ಈ ವೇಳೆಯಲ್ಲಿ ಬಾಂಬೆಯ ಪ್ರಾಂತ್ಯದಲ್ಲಿ ಮಹಿಳೆ ಶಿಕ್ಷಣಕ್ಕಾಗಿ ಶ್ರಮಿಸಿದ ಪ್ರಮುಖ ಸ್ತ್ರೀಮಣಿಗಳೆಂದರೆ ಫ್ರಾಂಕಿನ ಸೊರಬ್ಜಿ, ರಾಮಾಬಾಯಿ ರಾನಡೆ, ಪಂಡಿತ ರಾಮಾಬಾಯಿ ಮುಂತಾದವರು ಇವರ ಪ್ರಯತ್ನದಿಂದ ಮಹಿಳೆಯರ ಉನ್ನತ ಶಿಕ್ಷಣಕ್ಕೆ ಚಾಲನೆ ದೊರೆಯಿತು. ಇವರ ಪ್ರಥಮ ಹೆಜ್ಜೆ ಎಂದರೆ 1916ರಲ್ಲಿ ಪ್ರಥಮ ಬಾರಿಗೆ SNDT (ಶ್ರೀಮತಿ ನಾತಿಬಾಯಿ ದಮೋದರ್ ಥ್ಯಾಕರ್‌ಸೇ) ಎಂಬ ಮಹಿಳಾ ವಿಶ್ವವಿದ್ಯಾಲಯವನ್ನು ಡಾ. ಡಿ.ಕೆ. ಕಾರ್ವೆಯವರು ಪ್ರಾರಂಭಿಸಿದ್ದರು. ಹೀಗೆ ಪ್ರಪ್ರಥಮ ಬಾರಿಗೆ ದೆಹಲಿಯಲ್ಲಿ ವೈದ್ಯಕೀಯ ಕಾಲೇಜನ್ನು ಮಹಿಳೆಯರಿಗೆ 1916ರಲ್ಲಿ ಸ್ಥಾಪಿಸಲಾಯಿತು. ಇದನ್ನು ಲೇಡಿ ಹಾರ್ಡ್‌ಡಿಜ್ ಕಾಲೇಜು ಎಂದು ಕರೆದರು. 1946-47ರ ವೇಳೆಗೆ ಹೆಣ್ಣುಮಕ್ಕಳಿಗಾಗಿ ತಂದ ಶೈಕ್ಷಣಿಕ ಸಂಸ್ಥೆಗಳ ಸಂಖ್ಯೆಯೆಂದರೆ ಪ್ರಾಥಮಿಕ ಶಾಲೆ 21, 471 ಮಾಧ್ಯಮಿಕ ಶಾಲೆ 2570 ವೃತ್ತಿ ಮತ್ತು ತಾಂತ್ರಿಕ ಶಾಲೆಗಳು 4, 288 ಕಲಾ ಮತ್ತು ವಿಜ್ಞಾನ ಕಾಲೇಜು 59ರಷ್ಟಾಗಿತ್ತು. ಇಷ್ಟೆಲ್ಲಾ ಮಾಹಿತಿಯು ಇದ್ದರೂ ಕೂಡ, ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರ ಸೇರುವಿಕೆಯ ಬಗ್ಗೆಯಾಗಲೀ ಅವರ ಶೈಕ್ಷಣಿಕ ಪ್ರಗತಿಯ ಬಗ್ಗೆಯಾಗಲೀ ಸರಿಯಾದ ಮಾಹಿತಿ ದೊರೆತಿಲ್ಲ.[6]

### 2.1.3 ಆಧುನಿಕ ಶಿಕ್ಷಣ (ಸ್ವಾತಂತ್ರ್ಯನಂತರದ ಕಾಲದಲ್ಲಿ ಮಹಿಳಾ ಶಿಕ್ಷಣ)

ಭಾರತವು 1947ರಲ್ಲಿ ಸ್ವಾತಂತ್ರ್ಯ ಪಡೆಯಿತು. ಇಲ್ಲಿಮಹಿಳೆಯರಿಗೆ ಶಿಕ್ಷಣದಲ್ಲಿ ಹೆಚ್ಚು ಪ್ರೋತ್ಸಾಹವನ್ನು ನೀಡಲಾಯಿತು. ನಮ್ಮ ದೇಶದ ನಾಯಕರ ಚಿಂತನೆಯು ದೇಶದ (ಪ್ರಗತಿಯ ಸಲುವಾಗಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚು ಅವಕಾಶವನ್ನು ನೀಡಬೇಕೆಂಬುದಾಗಿತ್ತು) ಈ ನಿಟ್ಟಿನಲ್ಲಿ ಅನೇಕ ಸುಧಾರಕರು ಮಹಿಳಾ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದರು. ಆದ್ದರಿಂದಲೇ ಅನೇಕ ಮಹಿಳಾ-ಶಾಲಾ-ಕಾಲೇಜುಗಳನ್ನು ತೆರೆದರು. ಈ ವೇಳೆಯಲ್ಲಿ ಪ್ರಾರಂಭಿಸಿದ ಮತ್ತೆರಡು ವಿಶ್ವವಿದ್ಯಾಲಯಗಳೆಂದರೆ,

- ಶ್ರೀ ಪದ್ಮಾವತಿ ಮಹಿಳಾ ವಿದ್ಯಾನಿಲಯ : ಈ ಮಹಿಳಾ ವಿಶ್ವವಿದ್ಯಾನಿಲಯವನ್ನು ತಿರುಪತಿಯಲ್ಲಿ ತೆರೆಯಿತು. ಇದು ಆಂಧ್ರಪ್ರದೇಶದ ವ್ಯಾಪ್ತಿಯಲ್ಲಿ ಮಹಿಳೆಯರ ಶೈಕ್ಷಣಿಕ ಪ್ರಗತಿಗೆ ನೆರವಾಗುತ್ತಿದೆ.

- ಮದರ್ ಥೆರೆಸಾ ಮಹಿಳಾ ವಿಶ್ವವಿದ್ಯಾನಿಲಯ : ಕೊಡೈಕೆನಾಲ್ ಇದನ್ನು ೧೯೮೪ರಲ್ಲಿ ತೆರೆಯಲಾಯಿತು.

- ಇಷ್ಟೇ ಅಲ್ಲದೆ ಕರ್ನಾಟಕದಲ್ಲಿ ಇತ್ತೀಚಿನ ವರ್ಷಗಳಲ್ಲಿ ಅಂದರೆ ೨೦೦೩ರಲ್ಲಿ ಬಿಜಾಪುರದಲ್ಲಿ ಒಂದು ಪ್ರಥಮ ಮಹಿಳಾ ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಲಾಗಿದೆ. ಅಷ್ಟೇ ಅಲ್ಲದೆ ದೇಶದ ವಿವಿಧ ವಿಶ್ವವಿದ್ಯಾಲಯದಲ್ಲಿ ಮಹಿಳಾ ಅಧ್ಯಯನ ಕೇಂದ್ರವನ್ನು ಸ್ಥಾಪಿಸಲಾಗುತ್ತಿದೆ. ಈ ರೀತಿಯಾಗಿ ಸ್ವಾತಂತ್ರ್ಯ ನಂತರ ಕಾಲದಲ್ಲಿ ಮಹಿಳಾ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹವನ್ನು ನೀಡಲಾಗುತ್ತಿದೆ.

**ಪರಿಶಿಷ್ಟರಿಗೆ ತೆರೆದ ಶಾಲೆಗಳು**

ಪರಿಶಿಷ್ಟರಿಗೆ ಪ್ರತ್ಯೇಕ ಶಾಲೆಗಳನ್ನು ಕ್ರೈಸ್ತ ಮಿಷನರಿಗಳು, ಪ್ರಗತಿಪರ ವ್ಯಕ್ತಿಗಳು ಮತ್ತು ಬ್ರಿಟಿಷ್ ಸರ್ಕಾರವು ತೆರೆಯಿತು. ೧೯ನೇ ಶತಮಾನದ ಕೊನೆಯ ವೇಳೆಗೆ ಮದರಾಸ್ ಪ್ರಾಂತ್ಯದಲ್ಲಿ ಇಂತಹ ಶಾಲೆಗಳ ಸಂಖ್ಯೆ ೨೯೩೪ರಷ್ಟು ಇತ್ತಿತ್ತು. ಇವುಗಳನ್ನು ಪ್ರಮುಖವಾಗಿ ಪಂಚಮ ವಿದ್ಯಾರ್ಥಿಗಳಿಗೆ ತೆರೆಯಲಾಗಿತ್ತು. ಇವುಗಳಲ್ಲಿ ೬ ಸಂಸ್ಥೆಗಳನ್ನು ಬ್ರಿಟಿಷ್ ಸರ್ಕಾರವು ೪೯೧ ಸಂಸ್ಥೆಗಳನ್ನು ಮಂಡಳಿಗಳು ತೆರೆದವು. ಉಳಿದ ೧೬೧೭ ಸಂಸ್ಥೆಗಳನ್ನು ಸರ್ಕಾರದ ಧನಸಹಾಯದಿಂದ ನಡೆಯುತ್ತಿದ್ದವು.[7]

ಮೈಸೂರು ಸಂಸ್ಥೆಗಳಲ್ಲಿ ಪರಿಶಿಷ್ಟರಾಗಿ ಶಾಲೆಗಳನ್ನು ಮೈಸೂರು ಒಡೆಯರು ಮತ್ತು ಕ್ರೈಸ್ತ ಮಿಷನರಿಗಳು ಶಾಲೆಗಳನ್ನು ತೆರೆದಿದ್ದರೂ ೧೮೮೯-೯೧ರ ಅವಧಿಯಲ್ಲಿ ಈ ಶಾಲೆಯಲ್ಲಿ ಓದುತ್ತಿದ್ದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಯ ಸಂಖ್ಯೆ ೩೮೪ರಷ್ಟು ಇತ್ತು. ಆ ಸಮಯದಲ್ಲಿ ಶಾಲೆಗೆ ಹೋಗುವ ಮಕ್ಕಳ ಒಟ್ಟು ಪ್ರಮಾಣದಲ್ಲಿ ಪರಿಶಿಷ್ಟ ವಿದ್ಯಾರ್ಥಿಗಳು ೦.೨೩ರಷ್ಟು ಇದ್ದರೂ ಸರ್ಕಾರದ ಅನುದಾನ ಸಹಾಯದಿಂದ ಪರಿಶಿಷ್ಟ ಜಾತಿಯವರಿಗೆ ಬೋಧಿಸುವ ಶಾಲೆಗಳ ಸಂಖ್ಯೆ ಕ್ರಮೇಣ

ಪ್ರೋತ್ಸಾಹಧನ , ಪ್ರತಿಭಾಪುರಸ್ಕಾರ, ವೇತನ, ಹೆಚ್ಚುವರಿ ಊಟವೆಚ್ಚ, ವಸತಿ ವೆಚ್ಚ, ಭಾರತ ಸರ್ಕಾರದಿಂದ ನಗದು ಬಹುಮಾನ, ಉನ್ನತ ಶಿಕ್ಷಣದಲ್ಲಿ ವಿದ್ಯಾರ್ಥಿನಿಯರಿಗೆ ಧನಸಹಾಯ, ಅಧ್ಯಯನದ ಪ್ರವಾಸವೆಚ್ಚ, ಪುಸ್ತಕ ಬ್ಯಾಂಕ್ ಯೋಜನೆ, ಉದ್ಯೋಗಕೋಶ ಮತ್ತು ಉದ್ಯೋಗಗಳಿಗೆ ನೆರವಾಗುವ ತರಬೇತಿ ಇತ್ಯಾದಿಗಳು.

ಈ ಶೈಕ್ಷಣಿಕ ಸೌಲಭ್ಯಗಳು ಪರಿಶಿಷ್ಟ ಜಾತಿಯವರನ್ನು ನಿಧಾನವಾಗಿ ಶಿಕ್ಷಣದ ಸಂಸ್ಥೆಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿದ್ದರೂ ಕೂಡ ಅವರ ಪ್ರವೇಶ ತುಂಬಾ ತಡವಾಗಿದೆ. ಈ ಮೇಲೆ ತಿಳಿಸಿದ ಸವಲತ್ತುಗಳ ಫಲವಾಗಿ ಪರಿಶಿಷ್ಟ ಜಾತಿಯ ಸಣ್ಣ ಪ್ರಮಾಣದಲ್ಲಿ ಉನ್ನತ ಶಿಕ್ಷಣವನ್ನು ಪ್ರವೇಶಿಸಲು ಸಾಧ್ಯವಾಗಿದೆ. ಸ್ವಾತಂತ್ರ್ಯ ಬಂದು ಇಂದಿಗೆ ಸುಮಾರು ೫೬ ವರ್ಷಗಳಲ್ಲಿ ಪರಿಶಿಷ್ಟ ಜಾತಿಯ ಶೈಕ್ಷಣಿಕ ಸಾಧನೆ ಇನ್ನೂ ತೃಪ್ತಿಕರವಾಗಿಲ್ಲ. ಅದರಲ್ಲೂ ಈ ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯ ಉನ್ನತ ಶಿಕ್ಷಣದಲ್ಲಿ ಪ್ರಾತಿನಿಧಿತೆಯ ಪುರುಷ ವಿದ್ಯಾರ್ಥಿಗಳಿಗಿಂತ ಕಡಿಮೆ ಇದೆ. ಹೀಗೆ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ನಡುವೆ ಲಿಂಗಜಾತಿಯ ಅಸಮತೆಯ ಒಂದು ದೊಡ್ಡ ಸಮಸ್ಯೆಯಾಗಿ ಉಳಿದಿದೆ.

### 2.1.4 ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಸರ್ಕಾರವು ನೀಡಿರುವ ಸೌಲಭ್ಯಗಳು

ಪರಿಶಿಷ್ಟ ಜಾತಿ ಮತ್ತು ಪಂಗಡದವರು ಹಲವಾರು ದೌರ್ಜನ್ಯಗಳಿಗೆ, ಅನರ್ಹತೆಗಳಿಗೆ ಒಳಗಾಗಿದ್ದು ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಶೈಕ್ಷಣಿಕತ ಮುಂತಾದ ಕ್ಷೇತ್ರಗಳಲ್ಲಿ ಅಸಮಾನತೆ ಮತ್ತು ಶೋಷಣೆಗೆ ಬಲಿಯಾಗಿದ್ದ ಕೆಳವರ್ಗದವರಿಗೆ ರಕ್ಷಣೆ ಕೊಡಲು ಅಲ್ಲದೆ ಸಾಮಾಜಿಕ ಬದಲಾವಣೆಗೆ ಶಿಕ್ಷಣವೇ ಬಹುಮುಖ್ಯ ಕಾರಣವೆಂದು ಸ್ವಾತಂತ್ರ್ಯಾನಂತರ ಸರ್ಕಾರವು 1950 ಜನವರಿ 26ರಂದು ಅಸ್ತಿತ್ವಕ್ಕೆ ಬಂದ ಸಂವಿಧಾನದ ಮುಖ್ಯ ಉದ್ದೇಶ ಜಾತ್ಯಾತೀತ ಮತ್ತು ವರ್ಗಾತೀತ ಸಮಾಜವನ್ನು ನಿರ್ಮಾಣ ಮಾಡುವುದಾಗಿತ್ತು.

ಸಂವಿಧಾನವು ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಅನೇಕ ಸವಲತ್ತುಗಳನ್ನು ನೀಡಿದೆ. ಇದರ ಪ್ರಮುಖ ಉದ್ದೇಶ ಅಸ್ಪೃಶ್ಯತೆಯನ್ನು ತೊಡೆದು ಹಾಕುವುದು ಹಾಗೂ ಸಮಾನತೆಯನ್ನು ತರುವುದಾಗಿದೆ. ಸಂವಿಧಾನವು ನೀಡಿದ ಸೌಲಭ್ಯಗಳು ಈ ರೀತಿ ಇವೆ.

**14,15 ಮತ್ತು 16ನೇ ವಿಧಿಯ ಪ್ರಕಾರ**

ಧರ್ಮ, ಜಾತಿ, ಹುಟ್ಟು, ಜನ್ಮಸ್ಥಳ, ಭಾಷೆ, ಲಿಂಗ ಮತ್ತು ಜನಾಂಗ ಯಾವುದೇ ಆಧಾರದ ಮೇಲೆ ಪ್ರಜೆಗಳಲ್ಲಿ ಬೇಧ ಕಲ್ಪಿಸುವುದಿಲ್ಲ ಎಂದು ಹೇಳಲಾಗಿದೆ. 16ನೇ ವಿಧಿಯು ಎಲ್ಲಾ ಪ್ರಜೆಗಳಿಗೂ ಸಾರ್ವಜನಿಕ ಹುದ್ದೆಗಳಲ್ಲಿ ಸಮಾನ ಅವಕಾಶವನ್ನು ಕಲ್ಪಿಸಿಕೊಟ್ಟಿದೆ.

**17ನೇ ವಿಧಿಯ ಪ್ರಕಾರ**

ಯಾವುದೇ ರೀತಿಯಲ್ಲಿ ಅಸ್ಪೃಶ್ಯತೆಯನ್ನು ಆಚರಿಸುವುದು ಕಾನೂನಿನ ಪ್ರಕಾರ ಅಪರಾಧವಾಗಿದೆ.

**15(4)29(2) ವಿಧಿಯ ಪ್ರಕಾರ**

ಆದಿವಾಸಿಗಳ ಶೈಕ್ಷಣಿಕ ಅಭಿವೃದ್ಧಿಯ ದೃಷ್ಟಿಯಿಂದ ರಾಜ್ಯವು ಬುಡಕಟ್ಟು ಜನರಿಗೆ ಶೈಕ್ಷಣಿಕ ಸೌಲಭ್ಯವನ್ನು ಒದಗಿಸಿದೆ.

**23ನೇ ವಿಧಿಯ ಪ್ರಕಾರ**

ಮಾನವ ಶೋಷಣೆಯನ್ನು ನಿಷೇಧಿಸಲಾಗಿದೆ. ಅಲ್ಲದೆ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ವಿಶೇಷ ಸೌಲಭ್ಯವನ್ನು ಒದಗಿಸಲಾಗಿದೆ.

**29ನೇ ವಿಧಿಯ ಪ್ರಕಾರ**

ಶೈಕ್ಷಣಿಕವಾಗಿ ಬಳಲುತ್ತಿರುವ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಸರ್ಕಾರದಿಂದ ಧನ ಸಹಾಯವನ್ನು ಪಡೆಯುತ್ತಿರುವ ಶೈಕ್ಷಣಿಕ ಸಂಸ್ಥೆಗಳಲ್ಲಿ ಅವಕಾಶವನ್ನು ಕಲ್ಪಿಸುವುದು.

**30ನೇ ವಿಧಿಯ ಪ್ರಕಾರ**

14 ವರ್ಷದವರೆಗಿನ ಎಲ್ಲಾ ಮಕ್ಕಳಿಗೂ ಕಡ್ಡಾಯವಾಗಿ ಶಿಕ್ಷಣ ನೀಡತಕ್ಕದೆಂದು ಹಾಗೂ ಅಲ್ಪಸಂಖ್ಯಾತ ಗುಂಪಿಗೆ ಸೇರಿದಂತವರು ಶೈಕ್ಷಣಿಕ ಸಂಸ್ಥೆಗಳನ್ನು ಪ್ರಾರಂಭಿಸಿ ಆಡಳಿತವನ್ನು ನಡೆಸಬಹುದು.

**46ನೇ ವಿಧಿಯ ಪ್ರಕಾರ**

ಪರಿಶಿಷ್ಟಜಾತಿ ಮತ್ತು ಪಂಗಡಗಳ ಆರ್ಥಿಕ ಮತ್ತು ಶೈಕ್ಷಣಿಕ ಆಸಕ್ತಿಗಳನ್ನು ಸಂರಕ್ಷಿಸುವ ಅಂಶಗಳನ್ನು ಒಳಗೊಂಡಿದೆ.

**332 ಮತ್ತು 334ನೇ ವಿಧಿಯ ಪ್ರಕಾರ**

ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗಾಗಿ ಲೋಕಸಭೆ ಹಾಗೂ ರಾಜ್ಯವಿಧಾನ ಸಭೆಗಳಲ್ಲಿ ಕೆಲವು ಸ್ಥಾನಗಳನ್ನು ಮೀಸಲಿಡಲಾಗಿದೆ.

**320 ಮತ್ತು 335ನೇ ವಿಧಿಯ ಪ್ರಕಾರ**

ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸರ್ಕಾರಿ ವಲಯಗಳಲ್ಲಿ ಉದ್ಯೋಗ ಮೀಸಲಾತಿಯನ್ನು ನೀಡಲಾಗಿದೆ.

**388ನೇ ವಿಧಿಯ ಪ್ರಕಾರ**

ಪರಿಶಿಷ್ಟಜಾತಿ ಮತ್ತು ಪಂಗಡದವರನ್ನು ನೋಡಿಕೊಳ್ಳಲು ರಾಷ್ಟ್ರಪತಿಯವರಿಂದ ವಿಶೇಷ ಅಧಿಕಾರಿಯನ್ನು ನೇಮಕ ಮಾಡಲಾಗಿದೆ.

**350ನೇ ವಿಧಿಯ ಪ್ರಕಾರ**

ಶಿಕ್ಷಣವನ್ನು ಮಾತೃಭಾಷೆಯಲ್ಲಿ ನೀಡುವಂತಹ ಜವಾಬ್ದಾರಿ ರಾಜ್ಯಸರ್ಕಾರದ್ದಾಗಿದೆ.[8]

ಸ್ವಾತಂತ್ರ್ಯಾನಂತರ ಶೈಕ್ಷಣಿಕ ಕ್ಷೇತ್ರದಲ್ಲಿ ಅಭಿವೃದ್ಧಿಯು ಪೂರ್ಣಗೊಳ್ಳಲಿಲ್ಲ. ಕಾರಣ ಕೇಂದ್ರ ಸರ್ಕಾರವು ಯಾವುದೇ ಪ್ರಮುಖವಾದ ಆಯೋಗವನ್ನು ನೇಮಿಸಿರಲಿಲ್ಲ. 1948ರಲ್ಲಿ ಭಾರತ ಸರ್ಕಾರವು ಸರ್ವಪಲ್ಲಿ ರಾಧಾಕೃಷ್ಣನ್ ಅಧ್ಯಕ್ಷತೆಯಲ್ಲಿ ಒಂದು ಶಿಕ್ಷಣ ಆಯೋಗವನ್ನು ನೇಮಿಸಿತು. ರಾಷ್ಟ್ರೀಯ ನಿರ್ಮಾಣ ಹಾಗೂ ಸಾಂಸ್ಕೃತಿಕ ಉತ್ಥಾನದ ಸೇವೆಗಾಗಿ ಉನ್ನತ ಶಿಕ್ಷಣಕ್ಕೆ ನೀಡಿದ ಆದ್ಯತೆಯು ವಿಶ್ವವಿದ್ಯಾಲಯ ಶಿಕ್ಷಣ ಹಾಗೂ ತರಬೇತಿ ಪಡೆದ ಮಾನವ ಶಕ್ತಿಯ ಪೂರೈಕೆ ಇವುಗಳ ಸುಧಾರಣೆ ಹೊಸ ಶಿಕ್ಷಣ ನೀತಿಯಾಗಿ ಪರಿಣಮಿಸಿತು. ಭಾರತೀಯ ಶಿಕ್ಷಣ ಆಯೋಗವು 1965-66ರಲ್ಲಿ ಮರು ಪರಿಶೀಲನೆ ನಡೆಸುವವರೆಗೆ ರಾಧಾಕೃಷ್ಣನ್ ಆಯೋಗವು 1949ರಲ್ಲಿ ವಿಶ್ವವಿದ್ಯಾಲಯ ಶಿಕ್ಷಣದ ಬೆಳವಣಿಗೆಗೆ ನಿರ್ದೇಶನ ನೀಡಿತು.

ಕಲ್ಕತ್ತಾ ವಿಶ್ವವಿದ್ಯಾಲಯವು ಆಯೋಗದ ಸಲಹೆಯನ್ನು ಬೆಂಬಲಿಸುತ್ತ ಹನ್ನೆರಡು ವರ್ಷಗಳ ಶಾಲಾ ಜೀವನದ ತರುವಾಯ ಮೂರು ವರ್ಷಗಳ ಮೊದಲ ಪದವಿ ಕ್ರಮವನ್ನು ವಿಶ್ವವಿದ್ಯಾಲಯ ಆಯೋಗವು ಶಿಫಾರಸ್ಸು ಮಾಡಿತು. ಮೂಲ ಸಂಶೋಧನೆಯ ಮುಖಾಂತರ ಮುನ್ನಡೆದ ಜ್ಞಾನ ಸಂಪಾದನೆಯಲ್ಲಿ ವಿಶ್ವವಿದ್ಯಾಲಯ ಪಾತ್ರವನ್ನು ಒತ್ತಿ ಹೇಳಿತು.

ಸ್ನಾತಕೋತ್ತರ ಅಧ್ಯಯನ ಹಾಗೂ ಸಂಶೋಧನೆಯನ್ನು ಬಲಪಡಿಸುವ ವಿಜ್ಞಾನ, ಲಲಿತಕಲೆ, ಸಮಾಜವಿಜ್ಞಾನ ಹಾಗೂ ಅಂತರಾಷ್ಟ್ರೀಯ ಸಂಬಂಧಗಳು ಮುಂತಾದ ಅಧ್ಯಯನದ ಹೊಸ ವಿಷಯಗಳನ್ನು ಒಳಪಡಿಸುವ ಕ್ಷೇತ್ರವನ್ನು ವಿಸ್ತರಿಸುವ ಅನೇಕ ಕ್ರಮಗಳನ್ನು ಪ್ರಸ್ತಾಪಿಸಿತು. ವಿಶ್ವವಿದ್ಯಾಲಯ ಆಯೋಗ 1949ರ ವರದಿಯ ನಂತರ ಭಾರತೀಯ ಶಿಕ್ಷಣ ಆಯೋಗದ ಸಲಹೆಗಳಲ್ಲಿ ಉನ್ನತ ಶಿಕ್ಷಣದ ಪುನರಾವಲೋಕನ ಹಾಗೂ ಸುಧಾರಣೆಗೆ ಮುಂದಿನ ಅಡಿಯಿಟ್ಟಿತು. ಉನ್ನತ ಶಿಕ್ಷಣದ ಮೂಲಭೂತ ಸುಧಾರಣೆಗಾಗಿ ಬೇಡಿಕೆಯನ್ನು 1964 ರಲ್ಲಿ ಶಿಕ್ಷಣ ಆಯೋಗ ನೇಮಿಸಿದ ಭಾರತ ಸರ್ಕಾರದ ಗೊತ್ತುವಳಿಯಲ್ಲಿ ಶಕ್ತಿಯುತವಾಗಿ ಪ್ರತಿಪಾದಿಸಲಾಗಿದೆ. ಭಾರತದ ಸಾಮಾಜಿಕ ಹಾಗೂ ಶೈಕ್ಷಣಿಕ ಬೆಳವಣಿಗೆಯು ಸದ್ಯದ ಸ್ಥಿತಿಯಲ್ಲಿ ಶಿಕ್ಷಣ ಆಯೋಗವು ಕೆಲವು ವಿಶೇಷ ಹೊಣೆಗಾರಿಕೆಯನ್ನು ಗುರ್ತಿಸಿದೆ. ಉನ್ನತ ಶಿಕ್ಷಣದ ಬೆಳವಣಿಗೆಗಾಗಿ ಸಮಗ್ರ ಯೋಜನೆಯನ್ನು ರೂಪಿಸಿದೆ.

ಗ್ರಾಮೀಣ ಭಾರತದ ಮುನ್ನಡೆ ಕಾರ್ಯವನ್ನು ಸಾಧಿಸಲು 1949ರಲ್ಲಿ ವಿಶ್ವವಿದ್ಯಾಲಯ ಆಯೋಗವು ಗ್ರಾಮಾಂತರ ವಿದ್ಯಾಲಯಗಳ ಸ್ಥಾಪನೆಯನ್ನು ಶಿಫಾರಸ್ಸು ಮಾಡಿದೆ. ಈ ಉದ್ದೇಶಕ್ಕಾಗಿ 1954ರಲ್ಲಿ ನೇಮಿಸಿದ ರಾಷ್ಟ್ರೀಯ ಸಮಿತಿಯ ಹಳ್ಳಿಗಾಡಿನ ಬೇಡಿಕೆಗಳು ಮತ್ತು ಸಂಪನ್ಮೂಲಗಳಿಗೆ ತಕ್ಕ ಶಿಕ್ಷಣ ಮಾದರಿಯನ್ನು ಹಂತಹಂತವಾಗಿ ಬೆಳಸಿದೆ. ಇದರಿಂದಾಗಿ ಗ್ರಾಮೀಣ ಯುವಕರನ್ನು ಸಮಾಜ ಪ್ರಭಾವಿ ಮುಂದಾಳುಗಳನ್ನಾಗಿ ಮಾಡಲು ತರಬೇತಿ ಹಾಗೂ ನೈಪುಣ್ಯತೆ ಪಡೆಯುವುದಕ್ಕೆ ಸೌಲಭ್ಯ ಒದಗಿಸಲು ಪ್ರೌಢ ಶಿಕ್ಷಣಕ್ಕಾಗಿ 14 ಗ್ರಾಮೀಣ ಸಂಸ್ಥೆಗಳನ್ನು ಸಂಘಟಿಸಲಾಗಿದೆ. 1966ರಲ್ಲಿ ಗ್ರಾಮೀಣ ಉನ್ನತ ಶಿಕ್ಷಣದ ಸಲುವಾಗಿ ರಾಷ್ಟ್ರೀಯ ಗ್ರಾಮೀಣ ಉನ್ನತ ಶಿಕ್ಷಣದ ಬೆಳವಣಿಗೆಗೆ ಪರೀಕ್ಷೆಗಳನ್ನು ನಡೆಸಲು ಸಂಬಂಧಿಸಿದ ಎಲ್ಲಾ ವಿಷಯಗಳ ಮೇಲೆ ಭಾರತ ಸರ್ಕಾರ ಹಾಗೂ ರಾಜ್ಯಸರ್ಕಾರಗಳಿಗೆ ಸಲಹೆಯನ್ನು ನೀಡಿದೆ

ಸಾಮಾಜಿಕ, ಆರ್ಥಿಕ, ಅಭಿವೃದ್ಧಿಗೆ ಶಿಕ್ಷಣವು ಅತ್ಯಂತ ಪ್ರಮುಖವಾದುದಾಗಿದ್ದು, ಸಾಮಾಜಿಕ ಬದಲಾವಣೆಗೆ ಶಿಕ್ಷಣವು ಉಪಕರಣವಾಯಿತು. ಕೆಳವರ್ಗದವರ ಉನ್ನತಿಗಾಗಿ ಸ್ವಾತಂತ್ರ್ಯಾನಂತರ ಹಲವಾರು ಯೋಜನೆಗಳನ್ನು ರಾಷ್ಟ್ರೀಯ ಮುಖ್ಯವಾಹಿನಿಯಲ್ಲಿ ಸೇರಿಸಲಾಗಿದೆ. ಈ ಉದ್ದೇಶವಾಗಿ ಪರಿಶಿಷ್ಟ ಜಾತಿಯವರಿಗಾಗಿ ಪಂಚವಾರ್ಷಿಕ ಯೋಜನೆಗಳಲ್ಲಿ ಹೆಚ್ಚಿನ ಆದ್ಯತೆಯನ್ನು ಕೊಡಲಾಗಿದೆ. ಇದಕ್ಕಾಗಿ ವಿಶ್ವವಿದ್ಯಾಲಯಗಳನ್ನು, ಶಿಕ್ಷಣ ಆಯುಕ್ತರನ್ನು ಹಾಗೂ ಹಿಂದುಳಿದವರ ಆಯೋಗವನ್ನು ನೇಮಿಸಲಾಗಿದೆ. ಶಿಕ್ಷಣವು ಪರಿಶಿಷ್ಟ ಜಾತಿ ಮತ್ತು ಪಂಗಡದವರ ಸಾಮಾಜಿಕ ಮುನ್ನಡೆಗೆ ಆರ್ಥಿಕ ಅಭಿವೃದ್ಧಿ, ರಾಜಕೀಯ ಸ್ಥಿರತೆ ಮತ್ತು ರಾಷ್ಟ್ರೀಯ ಭಾವೈಕ್ಯತೆ ಹೊಂದಲು ಈ ಜನರಿಗೆ ಶೈಕ್ಷಣಿಕ ಸೌಲಭ್ಯವನ್ನು ಮೀಸಲಾತಿಯನ್ನು ಸಾಮಾನ್ಯ ಮತ್ತು ತಾಂತ್ರಿಕ ವಿದ್ಯಾಭ್ಯಾಸದಲ್ಲಿ ದೊರೆಯುವಂತೆ ವಯೋಮಿತಿಯಲ್ಲಿ ಅಂಕಗಳಲ್ಲಿ ರಿಯಾಯಿತಿಯನ್ನು ಮೆಟ್ರಿಕ್‌ಪೂರ್ವ ಮತ್ತು ಮೆಟ್ರಿಕ್‌ನಂತರ ವಿದ್ಯಾರ್ಥಿ ವೇತನವನ್ನು ದೊರಕಿಸಿಕೊಡುವುದು ಉಚಿತ ಪಠ್ಯಪುಸ್ತಕಗಳು ಸಮವಸ್ತ್ರಗಳು ಮೊದಲಾದವುಗಳನ್ನು ಒದಗಿಸಿಕೊಡಲಾಯಿತು.[9]

ಸ್ವಾತಂತ್ರ್ಯಾನಂತರ 1951 ರಲ್ಲಿ ಭಾರತದ ಜನಸಂಖ್ಯೆಯ ಶೇಕಡಾವಾರು ಅಕ್ಷರಸ್ಥರು ಈ ರೀತಿಯಲ್ಲಿ ಹಂಚಿಕೆಯಾಗಿದ್ದಾರೆ. 1951ರಲ್ಲಿ ಶೇಕಡ 16-67, 1961ರಲ್ಲಿ ಶೇಕಡ 34-44 ಹಾಗೂ 1971ರಲ್ಲಿ ಶೇಕಡ 39-45ರಷ್ಟು ಮಹಿಳಾ ಅಕ್ಷರಸ್ಥರು 1931-32ರಲ್ಲಿ ಶೇಕಡ 2-3ರಷ್ಟಿದ್ದ ಮಹಿಳೆಯರ ಪ್ರಮಾಣದಲ್ಲಿ ಸಾಕಷ್ಟು ಬದಲಾವಣೆಯಾಯಿತು. 1951 ಶೇಕಡ 7-93, 1961ರಲ್ಲಿ ಶೇಕಡ 12-9 , 1971ರಲ್ಲಿ ಶೇಕಡ 22-88, 1961ರಲ್ಲಿ ಶೇಕಡ 10-39 ಹಾಗೂ 1991ರ ವೇಳೆಗೆ ಶೇಕಡ 39-42ಕ್ಕೆ ಹೆಚ್ಚಾಯಿತು.

### 2.1.5 ಸಾಹಿತ್ಯಾವಲೋಕನ

ಸಚ್ಚಿದಾನಂದರವರು ತಮ್ಮ ಗ್ರಂಥ Structural Constrains in the Education of Scheduled Tribes and Scheduled Caste' (1992) ಪರಿಶಿಷ್ಟ ಜಾತಿ ಮತ್ತು ಪಂಗಡದವರ ಬಗ್ಗೆ ಅಧ್ಯಯನ ಮಾಡಿದ್ದಾರೆ. ಇವರು ಬುಡಕಟ್ಟು ಜನಾಂಗದವರು ಶೈಕ್ಷಣಿಕವಾಗಿ ಹಿಂದುಳಿದಿದ್ದಾರೆ. ಬುಡಕಟ್ಟು ಜನರಿಗೆ ಅನುಕೂಲವಾಗುವಂತೆ ಅವರು ವಾಸಿಸುವ ಪ್ರದೇಶಗಳಿಗೆ ಉಪಾಧ್ಯಾಯರುಗಳನ್ನು

ನೇಮಕ ಮಾಡಿದರೆ ಅಂತಹ ಪ್ರದೇಶಗಳಿಗೆ ಹೋಗಿ ಕಾರ್ಯ ನಿರ್ವಹಿಸಲು ಸೌಲಭ್ಯವಿರುವುದಿಲ್ಲ. ಪರಿಣಾಮವಾಗಿ ಉಪಾಧ್ಯಾಯರುಗಳು ಸಾಮಾನ್ಯವಾಗಿ ಕಾರ್ಯ ನಿರ್ವಹಿಸಲು ಸಾಧ್ಯವಾಗುವುದಿಲ್ಲ ಎಂಬುದಾಗಿ ಅಧ್ಯಯನ ಮಾಡಿದ್ದಾರೆ.

**ವೆಂಕಟಸುಬ್ಬಯ್ಯ. ಆರ್** Scheduled Caste in Higher Education (1993) ಎಂಬ ಮಹಾಪ್ರಬಂಧದಲ್ಲಿ ಪರಿಶಿಷ್ಟ ಜಾತಿಯವರ ಶಿಕ್ಷಣದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಶೈಕ್ಷಣಿಕ ವಿಷಯವನ್ನು ಕುರಿತ ಅಧ್ಯಯನವಾಗಿದ್ದು ಇಲ್ಲಿ ಪರಿಶಿಷ್ಟ ಜಾತಿ ಜನಾಂಗಕ್ಕೆ ಸೇರಿದ ವಿದ್ಯಾರ್ಥಿಗಳ ಸಾಮಾಜಿಕ ಹಿನ್ನೆಲೆಯನ್ನು ಅಲ್ಲದೆ ಶೈಕ್ಷಣಿಕ ಅಭಿಪ್ರಾಯಗಳನ್ನು ವ್ಯಕ್ತಿತ್ವ ಹಾಗೂ ವಿವಾಹದ ಅಭಿಪ್ರಾಯಗಳನ್ನು ಜಾತಿ ಪದ್ಧತಿಯಿಂದಾಗಿ ಜಾತಿ ಪಕ್ಷಪಾತಕ್ಕೊಳಗಾದವರ ಅನುಭವಗಳನ್ನು ಅಧ್ಯಯನ ಮಾಡಿದ್ದಾರೆ.

**ರಮೇಶ್‌ಶರ್ಮಾ.ಎನ್** Education of Women's of Scheduled Castes and Scheduled Tribes (1996) ಎನ್ನುವ ಗ್ರಂಥದಲ್ಲಿ ಮಹಿಳೆಯರ ಶಿಕ್ಷಣದ ಬಗ್ಗೆ ಸ್ಥಾನಮಾನದ ಬಗ್ಗೆ ಮಹಿಳೆಯರ ಶಿಕ್ಷಣ ಆರ್ಥಿಕಾಭಿವೃದ್ಧಿಗೆ ಹೇಗೆ ಸಹಾಯಕವಾಗಿವೆ ಎನ್ನುವ ಬಗ್ಗೆ ಅಧ್ಯಯನ ಮಾಡಿದ್ದಾರೆ. ಶೈಕ್ಷಣಿಕವಾಗಿ ಹಿಂದುಳಿದಿರುವ ಎರಡು ಗುಂಪುಗಳೆಂದರೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರು ಇವರಿಗೆ ಶೈಕ್ಷಣಿಕ ಸಮಾನತೆಯ ಅವಕಾಶಗಳಿರಬೇಕು. ಇವರನ್ನು ನ್ಯಾಯಯುತವಾಗಿ ಗಣನೆಗೆ ತೆಗೆದುಕೊಂಡು ಹೆಚ್ಚು ಉತ್ತೇಜನ ಕೊಡಬೇಕು. ತಾಂತ್ರಿಕ ಶಿಕ್ಷಣ, ವೃತ್ತಿಶಿಕ್ಷಣ ಮತ್ತು ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಸೌಲಭ್ಯವನ್ನು ಕೊಡಬೇಕು. ಆದರೆ ಇತ್ತೀಚಿನ ದಶಕಗಳಿಂದ ಈ ಜನಾಂಗದವರಿಗೆ ಶೈಕ್ಷಣಿಕ ಸೌಲಭ್ಯ ದೊರೆಯುತ್ತಿದೆ ಎಂಬುದಾಗಿ ಅಧ್ಯಯನ ಮಾಡಿದ್ದಾರೆ.

**ಸತಿಜಾ ಬಿ.ಆರ್.** ರವರು Trends in Education (1995) ಎಂಬ ಗ್ರಂಥದಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಸ್ತ್ರೀಯರ ಶಿಕ್ಷಣಕ್ಕೆ ಎಲ್ಲಾ ಹಂತಗಳಲ್ಲಿಯೂ ಅಂದರೆ ಖಾಸಗಿ ಹಾಗೂ ಸರ್ಕಾರಿ ವಲಯಗಳೆರಡರಲ್ಲೂ ಹೆಚ್ಚು ಪ್ರೋತ್ಸಾಹವನ್ನು ನೀಡಬೇಕು. ಶಿಕ್ಷಣ ಪಡೆದ ಸ್ತ್ರೀಯರು ಹೆಚ್ಚು ಉತ್ಸಾಹದಿಂದ ಸ ಮಾಜದ ಉನ್ನತಿಗೆ ಕಾರಣರಾಗುತ್ತಾರೆ. ಇಂದು ಸ್ತ್ರೀಯರಿಗೆ ಶೈಕ್ಷಣಿಕ ಅವಕಾಶ ಹೆಚ್ಚಿರುವುದರಿಂದ ಸಾಕಷ್ಟು ಮುಂದುವರೆದಿದ್ದಾರೆ ಎಂದು ಅಧ್ಯಯನ ಮಾಡಿದ್ದಾರೆ.

### 2.1.6 ಸಮಸ್ಯೆಯ ಆಯ್ಕೆ

ಮಹಿಳೆಯರ ಶಿಕ್ಷಣ ಒಂದು ಸಮಸ್ಯೆಯಾಗಿದೆ. ಅದರಲ್ಲಿಯೂ ಪರಿಶಿಷ್ಟ ಜಾತಿಯ ಸ್ತ್ರೀಯರು ಶಿಕ್ಷಣ ಪಡೆಯುವುದು ಕ್ರಾಂತಿಕಾರಿ ಸಾಧನೆಯಾಗಿದೆ. ಅದಾಗ್ಯೂ ಪರಿಶಿಷ್ಟ ಜಾತಿಯ ಶಿಕ್ಷಣಕ್ಕೆ ಇತ್ತೀಚಿನ ದಶಕಗಳಲ್ಲಿ ಹೆಚ್ಚಿನ ಪ್ರೋತ್ಸಾಹ ನೀಡಿದೆ. ಶಿಕ್ಷಣ ಪಡೆದ ಸ್ತ್ರೀಯರಿಗೆ ಶೈಕ್ಷಣಿಕ, ಶೈಕ್ಷಣಿಕವಲ್ಲದ ಅನೇಕ ಸಮಸ್ಯೆಗಳಿರಬಹುದು. ಈ ಸಮಸ್ಯೆಗಳ ನಿವಾರಣೆಗೆ ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಶಿಕ್ಷಣ ಹೇಗೆ ಸಹಕಾರಿಯಾಗಿದೆ ಎಂದು. ಈ ಅಧ್ಯಯನ ಉನ್ನತ ಶಿಕ್ಷಣ ಪಡೆದ ವಿದ್ಯಾರ್ಥಿನಿಯರ ಮುಂದಿನ ಜೀವನಕ್ಕೆ ಗುರಿಯಾಗಿಟ್ಟುಕೊಳ್ಳಲು ಶಿಕ್ಷಣ ಸಹಾಯವಾಗಿವೆಯೇ ಎಂಬುದನ್ನು ಅಧ್ಯಯನ ಮಾಡಲು ಈ ಸಮಸ್ಯೆಯನ್ನು ಕೈಗೊಳ್ಳಲಾಗಿದೆ.

ಅಡಿಟಿಪ್ಪಣಿಗಳು


1. Oxford Dictionary, 1995, P. 45
2. American Heritage Dictionary, 1991, P. 496
3. Tumin, 1981, P-12.
4. ಸಿಮನ್ ದಿ ಬೊವಾಳ 'The Second Sex'
5. ಥಾಪರ್ 1966 : 118-119
6. ಸಾಹೇಬ್ ದಿನ್ ಮೌರ್ಯ, 1988, ಪು. 57-58.
7. Progressive of education in India, 1901-02, P-136
8. Giridhar Gomango, Constitutional Provision for the scheduled caste and tribes, 1992,
9. ಭಾರತದ ದೇಶಕೋಶ, ಸಂಪುಟ-4, ಪು. 507

# ಅಧ್ಯಾಯ-3

# ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಾಮಾಜಿಕ ಮತ್ತು ಶೈಕ್ಷಣಿಕ ಸಮಸ್ಯೆಗಳು

3.1 ಸಾಮಾಜಿಕ ಸಮಸ್ಯೆ

3.1.1 ಜಾತಿ ಬೇಧದ ಸಮಸ್ಯೆ

3.1.2 ಲಿಂಗತಾರತಮ್ಯತೆ

3.1.3 ಲೈಂಗಿಕ ಕಿರುಕುಳ

3.1.4 ಯುವ ಅಶಾಂತಿ/ಚಳುವಳಿ/ವಿದ್ಯಾರ್ಥಿ ಪ್ರತಿಭಟನೆ

3.1.5 ವಿದ್ಯಾರ್ಥಿ ಸಂಘಟನೆಯಲ್ಲಿ ಭಾಗವಹಿಸುವಿಕೆಗೆ ಕಾರಣಗಳು

3.2 ಶೈಕ್ಷಣಿಕ ಸಮಸ್ಯೆ

3.2.1 ಸಾಮಾಜಿಕ ರಚನೆ

3.2.2 ಸಹಶಿಕ್ಷಣ ಪದ್ಧತಿ

3.2.3 ಶೈಕ್ಷಣಿಕ ವ್ಯವಸ್ಥೆ

3.2.4 ಆರ್ಥಿಕ ಪರಿಸ್ಥಿತಿ

3.2.5 ಉನ್ನತ ಶಿಕ್ಷಣದ ಸಮಸ್ಯೆಗಳು

3.2.6 ಶಿಕ್ಷಣದಿಂದಾದ ಬದಲಾವಣೆ

# ಅಧ್ಯಾಯ - 3

# ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟಜಾತಿ ವಿದ್ಯಾರ್ಥಿನಿಯರ ಸಾಮಾಜಿಕ ಮತ್ತು ಶೈಕ್ಷಣಿಕ ಸಮಸ್ಯೆಗಳು

## 3.1 ಸಾಮಾಜಿಕ ಸಮಸ್ಯೆಗಳು

ಯಾವುದೇ ಸಮಾಜವನ್ನು ತೆಗೆದುಕೊಂಡರೂ ಅದನ್ನು ವಿಭಿನ್ನವಾಗಿ ನೋಡುವುದು. ಅದು ಜಾತಿ-ಜನಾಂಗ ಭಾಷೆ, ಮತ್ತು ಧರ್ಮವಾಗಿರಬಹುದು. ಈ ಗುಂಪಿನ ಹಿನ್ನೆಲೆಯಲ್ಲಿ ವ್ಯತ್ಯಾಸವಿರುತ್ತದೆ. ಗುಂಪಿನ ಜನರ ಜೀವನದ ಮೌಲ್ಯ ಬೇರೆ ಬೇರೆಯಾಗಿರುತ್ತದೆ. ಇಂತಹ ಪರಿಸರ ಮತ್ತು ಗುಂಪಿನಿಂದ ಬಂದಿರುವುದರಿಂದ ಈ ಅಧ್ಯಯನವು ಇರುವಂತಹ ಪರಿಸರ ಹಿನ್ನೆಲೆಯಲ್ಲಿ ವಿದ್ಯಾರ್ಥಿನಿಯರ ಶೈಕ್ಷಣಿಕ ಸಾಮರ್ಥ್ಯವನ್ನು ಪರಿಶೀಲಿಸಲಾಗುತ್ತದೆ.

ಸಂಶೋಧನೆಗೆ ಮಾಹಿತಿಯನ್ನು ಎರಡು ಭಾಗಗಳಾಗಿ ವಿಂಗಡಿಸಲಾಗುವುದು. ಮೊದಲನೆಯ ಭಾಗದಲ್ಲಿ ವಿದ್ಯಾರ್ಥಿನಿಯರ ಸಾಮಾಜಿಕ ಸಮಸ್ಯೆ ಮತ್ತು ಎರಡನೇ ಭಾಗದಲ್ಲಿ ವಿದ್ಯಾರ್ಥಿನಿಯರ ಶೈಕ್ಷಣಿಕ ಸಮಸ್ಯೆಯನ್ನು ಪುನರಾವರ್ತನೆಯ ಪಟ್ಟಿಯ ಮೂಲಕ ವಿಶ್ಲೇಷಿಸಲಾಗುವುದು.

ಸಾಮಾನ್ಯವಾಗಿ ವಿದ್ಯಾರ್ಥಿನಿಯರಲ್ಲಿ ಕಂಡುಬರುವಂತಹ ಸಾಮಾಜಿಕ ಸಮಸ್ಯೆಗಳೆಂದರೆ ಜಾತಿಬೇಧದ ಸಮಸ್ಯೆ, ಲಿಂಗತಾರತಮ್ಯತೆಯ ಸಮಸ್ಯೆ, ಲೈಂಗಿಕ ಕಿರುಕುಳ ಸಮಸ್ಯೆ, ಮನೆಯ ಸಮಸ್ಯೆ ಮುಂತಾದವುಗಳಲ್ಲಿ ಕಂಡುಬರುತ್ತದೆ. ಹೀಗೆ ಪ್ರಸ್ತುತವಾಗಿ ನಾವು ಸಂದರ್ಶಿಸಿದ ವಿದ್ಯಾರ್ಥಿನಿಯರು.

### 3.1.1 ಜಾತಿ ಬೇಧದ ಸಮಸ್ಯೆ

ಸಂಪ್ರದಾಯಿಕ ಭಾರತೀಯ ಸಮಾಜದಲ್ಲಿ ಜಾತಿಪದ್ಧತಿಯು ಪ್ರಮುಖವಾದುದಾಗಿತ್ತು. ಭಾರತೀಯ ಸಮಾಜದಲ್ಲಿ ರಚನೆಯಲ್ಲಿ ಜಾತಿಯು ಪ್ರಮುಖ ಮೂಲಾಂಶವಾಗಿದೆ. ಜಾತಿಯು ಏಣಿ-ಶ್ರೇಣಿಯಿಂದ ವರ್ಗೀಕರಣದ ಶ್ರೇಣಿ ವ್ಯವಸ್ಥೆಯ ಅತ್ಯಂತ ಕೆಳಭಾಗದಲ್ಲಿ ಶೂದ್ರರಿದ್ದರೆ, ತುಟ್ಟ ತುದಿಯಲ್ಲಿ ಬ್ರಾಹ್ಮಣರಿದ್ದಾರೆ. ಹುಟ್ಟಿನ ಹಾಗೂ ವೃತ್ತಿಯಾಧಾರದ ಮೇಲೆ ಹುಟ್ಟಿಕೊಂಡ ಜಾತಿಪದ್ಧತಿಯಲ್ಲಿ ಹಲವಾರು ವ್ಯತ್ಯಾಸ ಕಂಡುಬಂದಿತ್ತು.

ಜಾತಿ ಪದ್ಧತಿಯ ಮುಖ್ಯವಾದ ಲಕ್ಷಣ ಎಂದರೆ ಶಿಕ್ಷಣ ಮತ್ತು ವೃತ್ತಿ ಶಿಕ್ಷಣ ಪಡೆಯುವ ಹಕ್ಕು ಸಹ ಮೇಲ್ವರ್ಗದವರಿಗೆ ಮೀಸಲಾಗಿತ್ತು.

ಕೆಳವರ್ಗದವರಿಗೆ ಶೈಕ್ಷಣಿಕ ನಿರ್ಬಂಧ ಹೇರಲಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಶೈಕ್ಷಣಿಕ ಅಸಮತೋಲನದ ಸ್ಥಿತಿ ಕಡಿಮೆಯಾಗಿದೆ. ಇಂದು ಕೆಳಜಾತಿಯವರೂ ಸಹ ಶೈಕ್ಷಣಿಕ ಚಲನೆಯಿಂದ ಸಮಾಜದಲ್ಲಿ ಬದಲಾವಣೆ ಕಾಣಬಹುದು. ಶಿಕ್ಷಣದಿಂದ ಸಾಮಾಜಿಕ ಆರ್ಥಿಕ ಅಂತಸ್ತನ್ನು ಪಡೆಯಬಹುದಾಗಿದೆ.

ಸಾಮಾನ್ಯವಾಗಿ ಜಾತಿಬೇಧ ಎಂದರೆ ಒಂದು ನಿರ್ದಿಷ್ಟ ಜಾತಿಯ ಬಗೆಯ ಒಮ್ಮುಖ ನಿಷ್ಠೆಯನ್ನು ಸೂಚಿಸುವುದು ಜಾತೀಯತೆ ಎಂದು ಎನ್ನಬಹುದು.

ಪ್ರಸ್ತುತ ಅಧ್ಯಯನದಲ್ಲಿ ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರಿಗೆ ನೀವು ಪ್ರಾಥಮಿಕ ಶಿಕ್ಷಣದಿಂದ ಪ್ರಸ್ತುತ ಶಿಕ್ಷಣದವರೆಗೂ ಯಾವಾಗಲಾದರೂ ಜಾತಿಬೇಧದ ಸಮಸ್ಯೆಯನ್ನು ಎದುರಿಸಿದ್ದಾರೆ ಎಂದು ಕೇಳಿದ ಪ್ರಶ್ನೆಗೆ

**ಕೋಷ್ಠಕ-3.6**

**ಜಾತಿಬೇಧದ ಸಮಸ್ಯೆಯ ಎದುರಿಸಿದ್ದಾರಾ ?**

| ಕ್ರ.ಸಂ. | ಶ್ರೇಣೀಕರಣ | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಹೌದು | 21 | 35.00 |
| 2 | ಇಲ್ಲ | 39 | 65,00 |
| | **ಒಟ್ಟು** | **60** | **100.00** |

ಕೋಷ್ಠಕ-3.1 ಪಟ್ಟಿಯಲ್ಲಿ ಸೂಚಿಸಿರುವಂತೆ ಸಂದರ್ಶಿಸಿದ 60 ಪ್ರತಿವಾದಿಗಳಲ್ಲಿ 21 ಪ್ರತಿವಾದಿಗಳು ಜಾತಿಬೇಧದ ಸಮಸ್ಯೆಯನ್ನು ಎದುರಿಸಿದ್ದಾಳೆ. 39 (65.00) ಪ್ರತಿವಾದಿಗಳು ಜಾತಿಬೇಧದ ಸಮಸ್ಯೆ ಎದುರಿಸಿಲ್ಲ ಎಂಬುದು ತಿಳಿದು ಬರುತ್ತದೆ.

ಈ ಕೋಷ್ಠಕದಿಂದ ತಿಳಿದುಬರುವುದೇನೆಂದರೆ ಜಾತಿಬೇಧದ ಸಮಸ್ಯೆಯು ಇಂದು ಸ್ವಲ್ಪಮಟ್ಟದಲ್ಲಿ ತಗ್ಗಿರುವುದು ಕಂಡುಬರುತ್ತದೆ. ಇದಕ್ಕೆ ಕಾರಣ ಸಂವಿಧಾನಾತ್ಮಕ ಶಾಸನಾತ್ಮಕ ಕ್ರಮಗಳು ಬಹಳ ಶಕ್ತಿಶಾಲಿಯಾಗಿ ಕಾರ್ಯನಿರ್ವಹಿಸುತ್ತಿರುವುದನ್ನು ಕಾಣಬಹುದಾಗಿದೆ.

ನಾವು ಮತ್ತೇ ಜಾತಿಬೇಧದ ಸಮಸ್ಯೆಯನ್ನು ಅನುಭವಿಸಿದ್ದರೆ ಅದನ್ನು ವಿವರಿಸಿ ಎಂದು ಕೇಳಿದ್ದವು ಅದಕ್ಕೆ ಕೆಲವು ವಿದ್ಯಾರ್ಥಿನಿಯರು ತಮ್ಮ ಅಭಿಪ್ರಾಯವನ್ನು ಈ ಕೆಳಕಂಡಂತೆ ಹಂಚಿಕೊಂಡಿದ್ದಾರೆ.

- ಶ್ಯಾಮಲ ದ್ವಿತೀಯ ಎಂ.ಎಸ್.ಎ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ. ನಾನು 3ನೇ ತರಗತಿಯಲ್ಲಿ ಓದುತ್ತಿರುವಾಗ ನಮ್ಮ ಹಳ್ಳಿಯಲ್ಲಿ ದೇವಸ್ಥಾನಕ್ಕೆ ಹೋಗುವಾಗ ನಮ್ಮನ್ನು ತಡೆಹಿಡಿದರು.

- ಮಾಲ ಪ್ರಥಮ ಎಂ.ಎ. ಸಮಾಜಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ

  ನಾನು 5ನೇ ತರಗತಿಯಲ್ಲಿ ಓದುತ್ತಿರುವಾಗ ಉನ್ನತ ಜಾತಿಯ ಹುಡುಗಿಯರು ನಮ್ಮನ್ನು ಆಟಪಾಠಗಳಲ್ಲಿ ನಮ್ಮನ್ನು ಹತ್ತಿರ ಸೇರಿಸುತ್ತಿರಲಿಲ್ಲ.

- ಕುಸುಮಾ ದ್ವಿತೀಯ ಎಂ.ಎ. ಕನ್ನಡ ವಿಭಾಗ

ನಾನು ಬಿ.ಇಡಿ. ಮಾಡುತ್ತಿರುವಾಗ ನಾವು ಪ್ರವಾಸಕ್ಕೆ ಹೋಗಿದ್ದೆವು. ಅಲ್ಲಿ ಉನ್ನತ ಜಾತಿಯ ಹುಡುಗಿಯರು ನಾವು ತಂದಿದ್ದ ಆಹಾರವನ್ನು ತಿನ್ನಲಿಲ್ಲ.

ಈ ರೀತಿಯ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ. ಅಂದರೆ ಈ ಅಭಿಪ್ರಾಯದಿಂದ ತಿಳಿಯುವುದೇನೆಂದರೆ ಇನ್ನೂ ಸಹ ಜಾತಿಬೇಧ ಸಮಸ್ಯೆಯು ಮುಂದುವರಿಯುವುದು ಕಂಡುಬಂದಿದೆ.

### 3.1.2 ಲಿಂಗತಾರತಮ್ಯತೆ

ಸ್ತ್ರೀಯರು ಮತ್ತು ಪುರುಷರುಗಳ ನಡುವಿನ ಜೈವಿಕ ವ್ಯತ್ಯಾಸಗಳಿಗೆ ಸಾಮಾಜಿಕ ಪ್ರಾಮುಖ್ಯತೆ ನೀಡುವ ಕ್ರಮ ಎಲ್ಲಾ ಸಮಾಜಗಳಲ್ಲೂ ಇದ್ದದ್ದೇ. ಕೆಲವು ಸಮಾಜಗಳಲ್ಲಿ ಈ ವ್ಯತ್ಯಾಸಗಳನ್ನು ತೀರಾ ಉತ್ಪ್ರೇಕ್ಷಿಸಲಾಗಿದ್ದರೆ ಮತ್ತೇ ಕೆಲವು ಸಮಾಜಗಳಲ್ಲಿ ಇವುಗಳನ್ನು ತೀರಾ ಆಲಕ್ಷಿಸಲಾಗಿರುವುದು ಇದೆ.

ಮೇಲ್ನೋಟಕ್ಕೆ 'ಲಿಂಗತಾರತಮ್ಯತೆ' ಎಂಬುದು ಇತರ ಕೆಲವು ಸಮಸ್ಯೆಗಳಿಗೆ ಹೋಲಿಸಿದಾಗ ಭಾರತದ ಗಂಭೀರ ಸಾಮಾಜಿಕ ಸಮಸ್ಯೆಗಳಲ್ಲೊಂದು. ಸಾಮಾನ್ಯವಾಗಿ ಲಿಂಗತಾರತಮ್ಯತೆ ಎಂದರೆ ಒಂದು ಲಿಂಗಕ್ಕೆ ಇನ್ನೊಂದು ಲಿಂಗಕ್ಕೂ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುವಂತಹ ಆಚರಣೆಯಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ನಾವು ವಿದ್ಯಾರ್ಥಿನಿಯರಿಗೆ ನೀವು ಪ್ರಾಥಮಿಕ ಶಿಕ್ಷಣದಿಂದ ಪ್ರಸ್ತುತ ಶಿಕ್ಷಣದವರೆಗೂ ಯಾವಾಗಲಾದರೂ ಲಿಂಗ ತಾರತಮ್ಯತೆಯ ಸಮಸ್ಯೆಯನ್ನು ಎದುರಿಸಿದ್ದಾರೆ ಎಂದು ಕೇಳಿದ್ದೇವೆ. ಅದಕ್ಕೆ ಉತ್ತರವಾಗಿ ಈ ಕೆಳಕಂಡ ಕೋಷ್ಠಕವನ್ನು ಗಮನಿಸಿ.

**ಕೋಷ್ಠಕ - 3.7**

**ಲಿಂಗತಾರತಮ್ಯತೆ ಸಮಸ್ಯೆಯನ್ನು ಎದುರಿಸಿದ್ದಾರೆ ?**

| ಕ್ರ.ಸಂ. | ಶ್ರೇಣೀಕರಣ | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಹೌದು | 11 | 18.33 |
| 2 | ಇಲ್ಲ | 49 | 81,66 |
| | **ಒಟ್ಟು** | **60** | **100.00** |

ಈ ಮೇಲ್ಕಂಡ ಕೋಷ್ಠಕವನ್ನು ಗಮನಿಸಿದಾಗ ಸಂದರ್ಶಿಸಿತ 60 ಪ್ರತಿವಾದಿಗಳಲ್ಲಿ ಬಹುಪಾಲು ಅಂದರೆ 49 ಶೇ. (81.66) ಪ್ರತಿವಾದಿಗಳು ಯಾವುದೇ ರೀತಿಯ ಲಿಂಗತಾರತಮ್ಯತೆಯನ್ನು ಎದುರಿಸಿಲ್ಲ.

ಆದರೆ ಕೇವಲ 11 (18.33) ಪ್ರತಿವಾದಿಗಳು ಲಿಂಗತಾರತಮ್ಯತೆಯನ್ನು ಎದುರಿಸಿರುವುದನ್ನು ಕಾಣಬಹುದು. ಇದರಿಂದ ತಿಳಿಯುವುದೇನೆಂದರೆ ಇಂದು ಆಧುನಿಕ ಶಿಕ್ಷಣದ ಪ್ರಭಾವದಿಂದ ಕುಟುಂಬದಲ್ಲಿ ತಂದೆ-ತಾಯಿಯಾಗಲೀ ಅಥವಾ ಶಾಲಾ-ಕಾಲೇಜುಗಳಲ್ಲಿ ಉಪನ್ಯಾಸಕರಿಂದ ಯಾವುದೇ ರೀತಿಯ ಲಿಂಗತಾರತಮ್ಯತೆಯು ಕಡಿಮೆಯಾಗಿರುವುದು ತಿಳಿದುಬರುತ್ತದೆ.

ಈ 11 ಜನ ವಿದ್ಯಾರ್ಥಿನಿಯರು ನಾವು ಮತ್ತೆ ಕೇಳಿದ ಪ್ರಶ್ನೆ ಯಾವ ರೀತಿಯ ಲಿಂಗತಾರತಮ್ಯತೆಯ ಅನುಭವಿಸಿದ್ದಾರೆ. ವಿವರಣೆ ನೀಡಿ ಎಂದು ಕೇಳಿರುವ ಪ್ರಶ್ನೆಗೆ ಅವರು ಹೆಚ್ಚಾಗಿತಂದೆ-ತಾಯಿಯರಿಂದಲೇ ಎಂದು ಉತ್ತರವನ್ನು ನೀಡಿದ್ದಾರೆ. ಗಂಡುಮಕ್ಕಳಿಗೆ ಹೆಚ್ಚಿನ

ಸ್ವಾತಂತ್ರ್ಯವಿದ್ದರೆ ಹೆಣ್ಣುಮಕ್ಕಳು ತಗ್ಗಿ-ಬಗ್ಗಿ ನಡೆಯಬೇಕು. ಗಂಡುಮಕ್ಕಳಿಗೆ ಬೇಕು ಬೇಡಿಕೆಗಳಿಗೆ ಮೊದಲ ಆದ್ಯತೆ ಇದ್ದರೆ ನಾವು ಹೊರಗಡೆ ಓಡಾಡಲು ಮನೆಯಲ್ಲಿ ಬಿಡುವುದಿಲ್ಲ ಎಂಬುದಾಗಿ ವಿವರಣೆಯನ್ನು ನೀಡಿರುವುದು ಕಂಡುಬಂದಿದೆ.

ಅಂದರೆ ಈ ವಿವರಣೆಯಿಂದ ತಿಳಿಯುವುದೇನೆಂದರೆ 21ನೇ ಶತಮಾನದಲ್ಲಿ ತಂದೆ-ತಾಯಿಯರು ಹೆಣ್ಣುಮಕ್ಕಳಿಗೆ ಯಾವುದೇ ರೀತಿಯ ಸ್ವಾತಂತ್ರ್ಯವನ್ನು ನೀಡಿರುವುದು ಕಂಡುಬಂದಿದೆ.

### 3.1.3 ಲೈಂಗಿಕ ಕಿರುಕುಳ

ಸಭ್ಯತೆಯ ಎಲ್ಲೆಗಳನ್ನು ಮೀರಿ ಕಾರ್ಯತಾಣಗಳಲ್ಲಿನ ಮಹಿಳಾ ವಿದ್ಯಾರ್ಥಿನಿಗಳೊಂದಿಗೆ ಲೈಂಗಿಕ ದುರ್ವ್ಯವಹಾರ ನಡೆಸುವುದು ಲೈಂಗಿಕ ಕಿರುಕುಳ ಉಳಿಸಿಕೊಳ್ಳುವುದು ಇಂದು ಶಿಕ್ಷಣಕ್ಷೇತ್ರದಲ್ಲಿ ಸ್ತ್ರೀಯರ ಲೈಂಗಿಕ ಶೋಷಣೆ ನಡೆಯುತ್ತಿರುವುದರ ಬಗ್ಗೆ ಇತ್ತೀಚಿನ ವರ್ಷಗಳಲ್ಲಿ ಭಾರೀ ಅಪಾದನೆಗಳು ಕೇಳಿ ಬರುತ್ತವೆ. ಈ ಕಿರುಕುಳ ಹಲವಾರು ರೀತಿಯದು. ವಿದ್ಯಾರ್ಥಿನಿಯನ್ನ ಉಪನ್ಯಾಸಕರು ಕಾಮುಕ ದೃಷ್ಟಿಯಿಂದ ನೋಡುವುದು. ಅವರೊಂದಿಗೆ ಅಸಭ್ಯವಾಗಿ ಸಂಭಾಷಿಸುವುದು ಕೀಳು ದರ್ಜೆಯ ಹಾಸ್ಯ ಮಾಡುವುದು. ಅವರ ಉಡುಪಿನ ಬಗ್ಗೆ ಪದೇ ಪದೇ ಪ್ರಸ್ತಾಪಿಸುವುದು. ಒಂಟಿಯಾಗಿ ತಮ್ಮ ಚೇಂಬರಿಗೆ ಕರೆಯಿಸಿಕೊಳ್ಳುವುದು. ಹೆಚ್ಚು ಅಂಕಗಳನ್ನು ನೀಡುತ್ತೇವೆ ಪಿಹೆಚ್.ಡಿ. ಪದವಿ ಕೊಡಿಸುತ್ತೇವೆಂದು, ಕೆಲಸ ಕೊಡಿಸುತ್ತೇವೆ ಎಂಬ ಆಸೆಯನ್ನು ತೋರಿಸಿ ತಮ್ಮ ಉದ್ದೇಶ ಸಾಧಿಸಿಕೊಳ್ಳುವುದು. ರಾಷ್ಟ್ರೀಯ ಮಹಿಳಾ ಆಯೋಗವು ೫ ರಾಜ್ಯಗಳಲ್ಲಿ ೨೩೩ ಮಂದಿ ವಿದ್ಯಾರ್ಥಿನಿಯರನ್ನು ಮಾಹಿತಿದಾರನ್ನಾಗಿಸಿಕೊಂಡು 1998ರಲ್ಲಿ ನಡೆಸಿದ ಸಮೀಕ್ಷೆಯಲ್ಲಿ ಶೇ. 68 ವಿದ್ಯಾರ್ಥಿನಿ ತಾವು ಲೈಂಗಿಕ ಕಿರುಕುಳವನ್ನು ಒಳಗಾಗಿರುವುದು ವ್ಯಕ್ತವಾಗಿದೆ.

ಪ್ರಸ್ತುತದಲ್ಲಿ ಅಧ್ಯಯನದಲ್ಲಿ ನೀವುಗಳು ಉಪಾಧ್ಯಾಯರಿಂದ ಲೈಂಗಿಕ ಕಿರುಕುಳ ಸಮಸ್ಯೆಯನ್ನು ಎದುರಿಸಿದ್ದಾರೆ? ಎಂದು ಕೇಳಿದ ಪ್ರಶ್ನೆಗೆ ಉತ್ತರವನ್ನು ಕೋಷ್ಟಕ-3.3ರಲ್ಲಿ ನೋಡಿ.

## ಕೋಷ್ಠಕ - 3.8

## ಲೈಂಗಿಕ ಕಿರುಕುಳ ಸಮಸ್ಯೆ ಎದುರಿಸಿದ್ದೀರಾ ?

| ಕ್ರ.ಸಂ. | ಶ್ರೇಣೀಕರಣ | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಹೌದು | 10 | 16.66 |
| 2 | ಇಲ್ಲ | 50 | 83.34 |
| | ಒಟ್ಟು | 60 | 100.00 |

ಈ ಮೇಲಿನ ಕೋಷ್ಠಕವನ್ನು ಗಮನಿಸಿದಾಗ ಸಂದರ್ಶಿಸಿದ 60 ಪ್ರತಿಪಾದಿಗಳಲ್ಲಿ 50 ( 83.34) ಪ್ರತಿಪಾದಿಗಳು ತಮ್ಮ ಶೈಕ್ಷಣಿಕ ಜೀವನದಲ್ಲಿ ಯಾವುದೇ ರೀತಿಯ ಲೈಂಗಿಕ ಕಿರುಕುಳವನ್ನು ಅನುಭವಿಸಿಲ್ಲ ಆದಲ್ಲದೆ ಕೇವಲ 10 (16.66) ಪ್ರತಿಪಾದಿಗಳು ಲೈಂಗಿಕ ಕಿರುಕುಳವನ್ನು ಎದುರಿಸಿರುವುದನ್ನು ಕಾಣಬಹುದಾಗಿದೆ. ಇದರಿಂದ ತಿಳಿಯಬಹುದೇನೆಂದರೆ ಉಪನ್ಯಾಸಕರು ವಿದ್ಯೆಯನ್ನು ಕಲಿಸುವಂತಹ ಗುರು ಇವನು ಅನೇಕ ಆಸೆಯನ್ನು ತೋರಿಸುವುದರ ಮೂಲಕ ತಮ್ಮ ವಿದ್ಯಾರ್ಥಿಯರನ್ನು ಈ ರೀತಿಯಲ್ಲಿ ಸಿಲುಕಿಸುವುದನ್ನು ಕಾಣಬಹುದಾಗಿದೆ. ಅಂದರೆ ಇಂದು ವಿಶ್ವವಿದ್ಯಾಲಯಗಳು ಪಿಹೆಚ್.ಡಿ. ಪದವಿಯನ್ನು ಕೊಡುವ ನೆಪದಲ್ಲಿ ಮಹಿಳಾ ವಿದ್ಯಾರ್ಥಿನಿಯರನ್ನು ಲೈಂಗಿಕತೆಯಲ್ಲಿ ಬಳಸಿಕೊಳ್ಳುವುದು ಸಹಜವಾಗಿದೆ.ಇದು ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರು ಹೊರತಾಗಿಲ್ಲ.

### 3.1.4 ಯುವ ಅಶಾಂತಿ/ ಚಳುವಳಿ : ವಿದ್ಯಾರ್ಥಿ ಪ್ರತಿಭಟನೆ

ಒಂದು ದೇಶದ ಭವಿಷ್ಯವು ಆ ದೇಶದ ಯುವ ಜನಾಂಗದ ಸ್ವಭಾವ, ಸಾಮರ್ಥ್ಯವನ್ನು ಮತ್ತು ಚಾರಿತ್ರ್ಯವನ್ನು ಹೊಂದಿಕೊಂಡಿದೆ. ಯುವಕರೇ ಈ ದೇಶದ ನಿಜವಾದ ಸಂಪತ್ತು ಆದರ್ಶವೊಂದಕ್ಕೆ ಅಥವಾ ಧ್ಯೇಯಪಾದಕ್ಕೆ ಬದ್ಧರಾಗಿರುವ ಹಿಡಿಯಷ್ಟು ಯುವಕ-ಯುವತಿಯರನ್ನು ಕೋರಿ ನಾನು ಜಗತ್ತಿನ ಇತಿಹಾಸವನ್ನೇ ಬದಲಿಸುತ್ತೇನೆ ಎಂದು ಸ್ವಾಮಿ ವಿವೇಕನಂದರು ಒಮ್ಮೆ ಹೇಳಿದ್ದುಂಟು. ಆದರೆ ಭವಿಷ್ಯದ ಭರವಸೆಯಂತಿರುವ ಯುವಕರನ್ನು ಅರ್ಥಾತ್ ಯುವಶಕ್ತಿಯನ್ನು ನಾಡಿ

ಉಪಯೋಗಕ್ಕಾಗಿ ಸದ್ಬಳಿಕೆ ಮಾಡಲಾಗದ ಸ್ಥಿತಿ ಇವೆ. ಅಂದರೆ ಅದೊಂದು ಗಂಭೀರವಾದ ಕೊರತೇ ಸರಿ. ಇಂತಹ ಕೊರತೆಯಿಂದಾಗಿಯೇ ಭಾರತದಲ್ಲಿ ಯುವ ಶಾಂತಿಯ ಸಮಸ್ಯೆ ಉದ್ಭವಿಸಿದೆ.

ಯುವ ಅಶಾಂತಿ ಎಂದರೆ ಯುವಶಕ್ತಿಯ ಸ್ಫೋಟ. ಹಾಗೆಯೇ ವಿದ್ಯಾರ್ಥಿ ಅಶಾಂತಿ ಎಂಬುದಾಗಿಯೇ ಅರ್ಥೈಸಲಾಗಿದೆ.

ವಿದ್ಯಾರ್ಥಿ ಶಕ್ತಿಯ ಸಾಮರ್ಥ್ಯ ಇಂದು ರಾಜಕೀಯ ಪರಿಸ್ಥಿತಿಗೆ ಸಿಲುಕಿ ಇದು ಯುವಶಕ್ತಿಯ ಅಂದೋಲನಕ್ಕೆ ಕಾರಣವಾಗಿದೆ. ಇದು ದೇಶದಲ್ಲಿ ಇದೊಂದು ಭಾರಿ ಸಮಸ್ಯೆಯಾಗಿ ಕಾಡುತ್ತಿರುತ್ತದೆ. ವಿದ್ಯಾರ್ಥಿಗಳು ಕಾಲೇಜು ಆವರಣದಲ್ಲಿ ಕಂಡುಬರುತ್ತಿರುವ ಅಂದು ಸಾಮಾಜಿಕ ಸಮಸ್ಯೆಯಾಗಿದೆ.

ಪ್ರಸ್ತುತದ ಅಧ್ಯಯನದಲ್ಲಿ ನೀವು ಯಾವುದಾದರೂ ವಿದ್ಯಾರ್ಥಿ ಪ್ರತಿಭಟನೆ, ಅಥವಾ ಚಳುವಳಿಯಲ್ಲಿ ಭಾಗವಹಿಸಿದ್ದಾರೆ ಎಂದು ಕೇಳಿರುವಂತಹ ಪ್ರಶ್ನೆಗೆ ಉತ್ತರವನ್ನು ಕೋಷ್ಟಕ-3.4ರಲ್ಲಿ ನೋಡಿ

**ಕೋಷ್ಟಕ-3.9**

**ವಿದ್ಯಾರ್ಥಿ ಪ್ರತಿಭಟನೆಯಲ್ಲಿ ಭಾಗವಹಿಸಿದ್ದೀರಾ ?**

| ಕ್ರ.ಸಂ. | ಶ್ರೇಣೀಕರಣ | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಭಾಗವಹಿಸಿದ್ದೇವೆ | 23 | 38.33 |
| 2 | ಭಾಗವಹಿಸಿಲ್ಲ | 37 | 61.64 |
| | **ಒಟ್ಟು** | **60** | **100.00** |

ಈ ಮೇಲ್ಕಂಡ ಕೋಷ್ಟಕದಿಂದ ತಿಳಿದುಬರುವ ವಿಷಯವೆಂದರೆ ಸಂದರ್ಶಿಸಿದ 60 ಪ್ರತಿವಾದಿಗಳಲ್ಲಿ 37 (61.64) ವಿದ್ಯಾರ್ಥಿಯ ಪ್ರತಿಭಟನೆಯಲ್ಲಿ ಭಾಗವಹಿಸದೇ ಇರುವುದು ಕಂಡುಬಂದಿದೆ. ಹಾಗೆಯೇ ಅತ್ಯಂತ ಕಡಿಮೆ 23 (38.33) ಪ್ರತಿಪಾದಿಗಳು ವಿದ್ಯಾರ್ಥಿ ಪ್ರತಿಭಟನೆಯಲ್ಲಿ ಭಾಗವಹಿಸಿರುವುದು ಕಂಡುಬಂದಿದೆ.

ಇದರಿಂದ ತಿಳಿಯುವುದೇನೆಂದರೆ ಕಡಿಮೆಯ ವಿದ್ಯಾರ್ಥಿನಿಯರು ಸಂಘಟನೆಯಲ್ಲಿ ಭಾಗವಹಿಸುತ್ತಿದ್ದಾರೆ. ಅಂದರೆ ಇವರಿಗೆ ಯಾವುದೇ ಸಂಘಟನೆಯ ಬಗ್ಗೆ ಅವರಿಗೆ ಜಾಗೃತಿ ಇರುವುದಿಲ್ಲ.

### 3.1.5 ವಿದ್ಯಾರ್ಥಿಯ ಸಂಘಟನೆಯಲ್ಲಿ ಭಾಗವಹಿಸುವಿಕೆಗೆ ಕಾರಣಗಳು

ನಾವು ಮತ್ತೆ ವಿದ್ಯಾರ್ಥಿಯ ಸಂಘಟನೆಯಲ್ಲಿ ಭಾಗವಹಿಸಿದ ವಿದ್ಯಾರ್ಥಿನಿಯರನ್ನು ಯಾವ ಯಾವ ಕಾರಣದಿಂದ ಸಂಘಟನೆಯಲ್ಲಿ ಭಾಗವಹಿಸಿದ್ದಾರೆ ಎಂದು ಕೇಳಿದ ಪ್ರಶ್ನೆಗೆ ಬಹುಸಂಖ್ಯೆಯ ಪ್ರತಿಪಾದಿಗಳು ಅಂದರೆ 13 ಜನ ಪ್ರತಿಪಾದಿಗಳು ಶಿಕ್ಷಕರ ಕೊರತೆಯನ್ನು ಹೇಳಿದ್ದಾರೆ. ಇನ್ನುಳಿದ 10 ಜನ ಪ್ರತಿಪಾದಿಗಳು ಕಾಲೇಜಿನ ವ್ಯವಸ್ಥೆಯ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿ ಅವರ ವಿರುದ್ಧ ಚಳುವಳಿ ಅಥವಾ ಪ್ರತಿಭಟನೆಯಲ್ಲಿ ತೊಡಗಿರುವುದು ವ್ಯಕ್ತವಾಗುವುದು.

ಹೀಗೆ ಈ ಅಧ್ಯಯನದಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಉನ್ನತ ಶಿಕ್ಷಣ ವ್ಯವಸ್ಥೆಯಲ್ಲಿ ಇವರು ಕೆಲವು ಪ್ರಮುಖ ಸಾಮಾಜಿಕ ಸಮಸ್ಯೆಯನ್ನು ಎದುರಿಸಿಸುತ್ತಿರುವುದನ್ನು ನಾವು ಗಮನಿಸಬಹುದಾಗಿದೆ. ನಾವು ನಂತರದ ಭಾಗದ ಈ ವಿದ್ಯಾರ್ಥಿಗಳು ಕೆಲವು ಶೈಕ್ಷಣಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ ಅವುಗಳನ್ನು ತಿಳಿದುಕೊಳ್ಳುವ ಪ್ರಯತ್ನ ಮಾಡಿದ್ದೇನೆ.

### 3.2 ಶೈಕ್ಷಣಿಕ ಸಮಸ್ಯೆಗಳು

ವಿಶ್ವದ ಇತಿಹಾಸವನ್ನು ಅವಲೋಕಿಸಿದಾಗ ಅನೇಕ ರಾಷ್ಟ್ರಗಳ ಪ್ರಗತಿಗೆ ಶಿಕ್ಷಣವು ತನ್ನ ಕೊಡುಗೆಯನ್ನು ನೀಡಿದೆ. ಶೈಕ್ಷಣಿಕ ಕ್ರಾಂತಿಯು ಸ್ತ್ರೀ-ಪುರುಷರೆಂಬ ಬೇಧವಿಲ್ಲದೆ ಪ್ರಗತಿ ಸಾಧಿಸಲು ಪ್ರಯತ್ನಿಸಲಾಗುತ್ತಿದೆ. ಸ್ತ್ರೀ ಶಿಕ್ಷಣವು ಕೆಲವೇ ಶ್ರೀಮಂತ ಕುಟುಂಬಗಳಲ್ಲಿ ಹಾಗೂ ಮೇಲ್ವರ್ಗದ ಕುಟುಂಬದವರಿಗೆ ಮಾತ್ರ ದೊರೆಯುತ್ತಿತ್ತು. ಆದರೆ ಬ್ರಿಟೀಷರ ಕಾಲದಲ್ಲಿ ಹಾಗೂ ಸ್ವತಂತ್ರ್ಯ ಭಾರತದಲ್ಲಿ ಸಾಮಾನ್ಯ ಪ್ರಜೆಗೂ ಹೆಚ್ಚಿನ ಮಟ್ಟದ ಶೈಕ್ಷಣಿಕ ಅವಕಾಶಗಳನ್ನು ನೀಡಲಾಗಿದೆ. ದೇಶದ ಒಟ್ಟಾರೆ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಸ್ತ್ರೀಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಗಿದೆ. ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ್ದರಿಂದ ಸಾಂಪ್ರದಾಯಿಕ ವಿಚಾರಗಳಿಂದ ಹೊರಬರಲು ಸಾಧ್ಯವಾಯಿತು. ಇಂದು ಸ್ತ್ರೀಯರಿಗೆ ಪುರುಷ ಸಮಾನ ಶಿಕ್ಷಣ ದೊರೆಯುತ್ತಿದೆ.

ಜವಾಹರಲಾಲ ನೆಹರುರವರು ಸ್ತ್ರೀ ಶಿಕ್ಷಣದ ಬಗ್ಗೆ,

Education of boy is education of one person,but education of girls is the education of entire family. Truly no argument is required in defence of women's education. For my part, I have always been strongly of the opinion that what if it is no possible to neglet women's education the persons are abvious. If you educate the women probably men will be affected and in any event children will be affected.[1]

ಮಾರ್ಟಿನ್ ಲೂಥರ್‌ರವರು

The world has need of education men and women to the end that men govern the country properly and that women may properly bring up their children care for their domestics and directs the affairs aof the households

ಗಾಂಧೀಜಿಯವರು

The question of the education of children cannot be soled unless efforts are made simultaneously to slove the women's education and that I have no hesitation of saying that as long as he do not have real mother teacher who can successfully Impart ture education to our children they will reamin uneducated even through they may be going to schools. She must have special knowledge of the management of the home care of children their education etc...[2]

Hortage report ನಲ್ಲಿ ಸ್ತ್ರೀ ಶಿಕ್ಷಣದ ಬಗ್ಗೆ

The importanceof the education of girls and women's in IOndia at the present moment cannot be overated. The middle and high classes of India have long suffered from the dualism of an educated man hood and an ignorant women hood dualism that lower the whole level of the home and domestic life and has its reaction on personal and national character the innate intelligence of domestic responsiblilioty, her experence of house hold management make her shrud penetrating and wise within her own sphere. The education of women will make available to the country awath of capacity that is now largely wasted through lack of affort unity..[3]

ಒಟ್ಟಾರೆ ಸ್ತ್ರೀ ಶಿಕ್ಷಣದ ಆಮೂಲಾಗ್ರ ಅವಶ್ಯಕತೆಯು 'ತೊಟ್ಟಿಲ ತೂಗುವ ಕೈ ಜಗವ ತೂಗಿತು'' ಎನ್ನುವ ಗಾದೆ ಎದ್ದು ಕಾಣುತ್ತದೆ.

ಭಾರತದಲ್ಲಿ ಶಿಕ್ಷಣವು ಬ್ರಿಟೀಷ್ ಅಧಿಕಾರಿಗಳಿಂದ ಈಸ್ಟ್ ಇಂಡಿಯಾ ಕಂಪನಿಯ 1813 ಚಾರ್ಟರ್ ಆಕ್ಟ್' ಎಂಬ ಕಾಯ್ದೆ ಜಾರಿಗೆ ಬಂದ ನಂತರ ಶಿಕ್ಷಣದ ಸಂಘಟನೆಯ ಕಾರ್ಯ ಪ್ರಾರಂಭವಾಯಿತು.[4] ಲಂಡನ್ ಮಿಷನರಿ ಸೊಸೈಟಿ, ಚರ್ಚ್ ಮಿಷನರಿ ಸೊಸೈಟಿ ಇವು ಶೈಕ್ಷಣಿಕ ಕಾರ್ಯ ನಿರ್ವಹಿಸಿದವು. ಭಾರತೀಯ ಸ್ಥಿತಿಗತಿಗಳನ್ನು, ರೂಢಿಗಳನ್ನು ಅಧ್ಯಯನ ಮಾಡಿ ಸ್ತ್ರೀಯರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆದರು. ಕಲ್ಕತ್ತಾದಲ್ಲಿ ಯು 1820ರಲ್ಲಿ ಬಂಗಾಲಿ ಹೆಣ್ಣು ಮಕ್ಕಳ ಶಾಲೆಯನ್ನು ಪ್ರಾರಂಭಿಸಿದರು.

1854ರಲ್ಲಿ ಮಾಡಲಾದ ವುಡ್ಸ್ ಡಿಸ್ ಪ್ಯಾಚ್‌ನ ಶಿಫಾರಸ್ಸುಗಳಿಂದ ಸ್ತ್ರೀಶಿಕ್ಷಣಕ್ಕೆ ಪ್ರಾಮುಖ್ಯತೆಯನ್ನು ಕೊಡಲಾಯಿತು.

1854ರಿಂದ 1882ರವರೆಗೆ ಮಹಿಳಾ ಶಿಕ್ಷಣವು ವಿಸ್ತರಣೆಗೊಂಡಿತು. 1882ರಲ್ಲಿ ಶಿಕ್ಷಣ ಆಯೋಗವು ಗುರ್ತಿಸಿರುವಂತೆ ಸ್ತ್ರೀಶಿಕ್ಷಣ ಅತ್ಯಂತ ಹಿಂದುಳಿದಿದೆ. ಆದ್ದರಿಂದ ಮಹಿಳಾ ಶಿಕ್ಷಣಕ್ಕೆ ಹೆಚ್ಚು ಸವಲತ್ತುಗಳನ್ನು ಒದಗಿಸಬೇಕೆಂದು ಶಿಫಾರಸ್ಸು ಮಾಡಿತು.

1902ರಲ್ಲಿ ಭಾರತದಲ್ಲಿ ಸ್ತ್ರೀ ಶಿಕ್ಷಣದ ಪ್ರಗತಿಯು ತಕ್ಕಮಟ್ಟಿಗೆ ಬೆಳೆಯಿತು. ಈ ಹಂತದ ಅತ್ಯಂತ ಮುಖ್ಯ ಸಾಧನೆಯೆಂದರೆ, ಮಹಿಳೆಯರು ವಿಶ್ವವಿದ್ಯಾಲಯವನ್ನು ಪ್ರವೇಶ ಮಾಡಿದ್ದು, 1902ರಿಂದೀಚೆಗೆ ಹೆಚ್ಚು ಆದ್ಯತೆಯನ್ನು ನೀಡಲಾಯಿತು. ಈ ವೇಳೆಯಲ್ಲಿ 12 ಮಹಿಳಾ ಕಾಲೇಜುಗಳನ್ನು ಸ್ಥಾಪಿಸಲಾಯಿತು. ಸ್ತ್ರೀಯರ ಶಿಕ್ಷಣಕ್ಕೆ ಲಾರ್ಡ್ ಕರ್ಜನ್ ಮಹಿಳೆಯರ ಶಿಕ್ಷಣವು ಅವರ ಸಾಮಾಜಿಕ ಅವಶ್ಯಕತೆಗಳಿಗೆ ಅನುಗುಣವಾಗಿರಬೇಕು. 19ನೇ ಶತಮಾನದ ಮಧ್ಯ ಭಾಗದಲ್ಲಿ ಸ್ತ್ರೀಯರ ಅಭಿವೃದ್ಧಿಗೆ ಹೆಚ್ಚು ಮಹತ್ವ ನೀಡಿತು. 1916ರಲ್ಲಿ ಭಾರತೀಯ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. ಮಹಿಳಾ ಶಿಕ್ಷಣದ ಇತಿಹಾಸದಲ್ಲೇ ಇದೊಂದು ಮೈಲಿಗಲ್ಲಾಗಿದೆ. 1922ರಲ್ಲಿ ಮಹಿಳೆಯರನ್ನು ವೃತ್ತಿ ಶಿಕ್ಷಣವು ಆಕರ್ಷಿಸತೊಡಗಿತು.[5]

ಸ್ವಾತಂತ್ರ್ಯಾನಂತರ 1948ರಲ್ಲಿ ಭಾರತ ಸರ್ಕಾರವು ಸರ್ವಪಲ್ಲಿ ರಾಧಾಕೃಷ್ಣನ್ ಅಧ್ಯಕ್ಷತೆಯಲ್ಲಿ ಒಂದು ಶಿಕ್ಷಣ ಆಯೋಗವನ್ನು ನೇಮಿಸಿತು. ರಾಷ್ಟ್ರೀಯ ನಿರ್ಮಾಣ ಹಾಗೂ ಸಾಂಸ್ಕೃತಿಕ ಉತ್ಥಾನದ ಸೇವೆಗಾಗಿ ಉನ್ನತ ಶಿಕ್ಷಣಕ್ಕೆ ಹೆಚ್ಚು ಆದ್ಯತೆಯನ್ನು ನೀಡಿತು. ಈ ಆಯೋಗವು ವಿಶ್ವವಿದ್ಯಾಲಯದ

ಶಿಕ್ಷಣದ ಬೆಳವಣಿಗೆಗೆ ನಿರ್ದೇಶನ ನೀಡಿತು. ಸ್ವಾತಂತ್ರ್ಯ ಭಾರತದಲ್ಲಿ ಮಹಿಳಾ ಶಿಕ್ಷಣವು ಸಾಕಷ್ಟು ಪ್ರಗತಿ ಸಾಧಿಸಿತು. ಆದರೂ ಈ ಪ್ರಗತಿ ಮಂದವಾಗಿಯೇ ಇತ್ತು. ಹೆಚ್ಚಿನದಾಗಿ ಸ್ತ್ರೀಯರ ವಿಶ್ವವಿದ್ಯಾಲಯಗಳು ಕೇವಲ ನಗರಗಳಲ್ಲಿ ಕೇಂದ್ರೀಕೃತವಾಗಿದ್ದು, ಈ ಸಮಸ್ಯೆಗೆ ಪರಿಹಾರ ಕಂಡುಹಿಡಿಯಲು ಕೇಂದ್ರ ಸರ್ಕಾರ 1958ರಲ್ಲಿ ರಾಷ್ಟ್ರೀಯ ಸಮಿತಿಯನ್ನು ನೇಮಕ ಮಾಡಿತು. ಈ ಸಮಿತಿಯ ಶಿಫಾರಸ್ಸುಗಳೆಂದರೆ ಮಹಿಳಾ ಶಿಕ್ಷಣಕ್ಕೆ ಅದರಲ್ಲಿಯೂ ಗ್ರಾಮೀಣ ಮಹಿಳೆಯರ ಶಿಕ್ಷಣಕ್ಕೆ ವಿಶೇಷ ಗಮನವನ್ನು ಕೊಡಬೇಕು ಎಂಬುದಾಗಿತ್ತು.[6]

ಸ್ತ್ರೀಯರ ಶೈಕ್ಷಣಿಕ ಸಮಸ್ಯೆಗಳನ್ನು ಬಗೆಹರಿಸಲು ಕಳೆದ ದಶಕಗಳಿಂದೀಚೆಗೆ ಆಯೋಗಗಳನ್ನು ಸ್ಥಾಪಿಸಲಾಯಿತು. 1963ರ ಭಕ್ತವತ್ಸಲಂ ಆಯೋಗವು ಸ್ತ್ರೀಯರ ಶೈಕ್ಷಣಿಕ ಸಮಸ್ಯೆಯನ್ನು ಅಧ್ಯಯನ ಮಾಡುವುದಾಗಿತ್ತು.

ಮಹಿಳೆಯರು 1976ರ ವೇಳೆಗೆ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾದರು. ಆದ್ದರಿಂದ 1976 ವರ್ಷವನ್ನು ಮಹಿಳಾ ಶಿಕ್ಷಣ ವರ್ಷ ಎಂದು ಕರೆಯಲಾಗಿದೆ.[7]

ಸ್ತ್ರೀಯರ ಉನ್ನತ ಶಿಕ್ಷಣಕ್ಕೆ ಕೆಲವೇ ದಶಕಗಳಿಂದೀಚೆಗೆ ಹೆಚ್ಚಿನ ಆಸಕ್ತಿಯನ್ನು ವಹಿಸಲಾಯಿತು. ಸ್ತ್ರೀಯರು ಇತ್ತೀಚಿನ ವರ್ಷಗಳಲ್ಲಿ ಪುರುಷರಿಗೆ ಸಮನಾಗಿ ರಾಜಕೀಯ, ಸಾಂಸ್ಕೃತಿಕ, ಸಮಾನತೆಯ ಪ್ರಾತಿನಿಧ್ಯವನ್ನು ಹೊಂದಿದ್ದರು. ಆದರೆ ಶೈಕ್ಷಣಿಕ ಅಂಶ ಕಡಿಮೆಯಾಗಿದ್ದಿತು. ಭಾರತದಲ್ಲಿ ಸ್ತ್ರೀಯರ ಉನ್ನತ ಶಿಕ್ಷಣಕ್ಕೆ ಹೆಚ್ಚು ಮಹತ್ವವನ್ನುಕೊಡಲಾಯಿತು. ಮಹಿಳಾ ಕಾಲೇಜು ಹಾಗೂ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. 1982-92ರವರೆಗಿನ ಮಹಿಳಾ ಕಾಲೇಜುಗಳೆಂದರೆ

ಪಟ್ಟಿ - 1

| ವರ್ಷ | ಮಹಿಳಾ ಕಾಲೇಜು |
|---|---|
| 1982-83 | 647 |
| 1984-85 | 712 |
| 1986-87 | 780 |
| 1988-89 | 824 |
| 1989-90 | 925 |

ಎಸ್.ಎನ್.ಡಿ.ಟಿ. ಮಹಿಳಾ ವಿಶ್ವವಿದ್ಯಾಲಯ, ಮುಂಬೈ (ಪೂನಾ) ಮದರ್ ತೆರೇಸಾ ಮಹಿಳಾ ವಿಶ್ವವಿದ್ಯಾಲಯ, ಕೊಡೈಕೆನಾಲ್, ಪದ್ಮಾವತಿ ಮಹಿಳಾ ವಿಶ್ವವಿದ್ಯಾಲಯ, ತಿರುಪತಿ ಇವುಗಳು ಪ್ರಮುಖ ವಿಶ್ವವಿದ್ಯಾಲಯಗಳಾಗಿವೆ.[8]

ಸ್ವಾತಂತ್ರ್ಯಾನಂತರದ ಸಮಯದಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ಸ್ತ್ರೀಯರ ಸಂಖ್ಯೆಯು ಹೆಚ್ಚಾಯಿತು. ಒಟ್ಟು ವಿಶ್ವವಿದ್ಯಾಲಯ ಹಾಗೂ ಕಾಲೇಜುಗಳ ಸಂಖ್ಯೆಯಲ್ಲಿ 43,000ಕ್ಕೆ ಶೇಕಡ 10ರಷ್ಟು ಮಹಿಳೆಯರು ದಾಖಲಾಗಿದ್ದಾರೆ. 1982-1992ರವರೆಗೆ ಮಹಿಳೆಯರ ಉನ್ನತ ಶಿಕ್ಷಣದ ಪ್ರಮಾಣ ಈ ರೀತಿಯಲ್ಲಿದೆ ಎಂದು ಅಂದಾಜು ಮಾಡಲಾಗಿದೆ.

ಪಟ್ಟಿ - 2

ಉನ್ನತ ಶಿಕ್ಷಣ ಪಡೆಯುತ್ತಿರುವ ಮಹಿಳೆಯರ ದಾಖಲಾತಿ

| ದಾಖಲಾತಿ ವರ್ಷ | ಒಟ್ಟು ದಾಖಲಾತಿ | ಮಹಿಳೆಯರ ಸಂಖ್ಯೆ | ಶೇಕಡವಾರು |
|---|---|---|---|
| 1982-83 | 31,33,093 | 8,80,156 | 28.1 |
| 1983-85 | 33,07,649 | 9,40,252 | 28.4 |
| 1985-87 | 36,05,029 | 10,67,484 | 29.6 |
| 1986-89 | 37,54,409 | 11,48,849 | 30.6 |
| 1988-90 | 40,74,676 | 12,91,672 | 31.7 |
| 1990-91 | 44,25,242 | 14,36,887 | 32.5 |
| 1991-92 | 46,11,107 | 15,12,270 | 32.8 |

ಸಮಾಜದಲ್ಲಿ ಸ್ತ್ರೀಯರ ಪಾತ್ರವು ಅತ್ಯಂತ ಪ್ರಮುಖವಾದುದು. ಭವಿಷ್ಯದಲ್ಲಿ ಶಿಕ್ಷಣ ಉತ್ತಮ ಜೀವನ ನಡೆಸುವ ಒಂದು ಅಂಶವಾಗಿದೆ. ಇಂದು ಶಿಕ್ಷಣ ಪಡೆದ ಸ್ತ್ರೀ ಆರ್ಥಿಕವಾಗಿ ಸ್ವತಂತ್ರಳಾಗಿ ಅಭಿವೃದ್ಧಿಯನ್ನು ಸಾಧಿಸಿ ಬಡತನವನ್ನು ನಿವಾರಣೆ ಮಾಡಬಹುದಾಗಿದೆ. ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹವನ್ನು ಕೊಡಲಾಗಿದೆ. ಏಕೆಂದರೆ ಶಿಕ್ಷಣ ಸಾಮಾಜಿಕ ಬದಲಾವಣೆಯ ಒಂದು ಸಾಧನ.[9]

ಸ್ತ್ರೀಯರ ಶಿಕ್ಷಣ ಪಡೆಯುವಲ್ಲಿ ಕಂಡು ಬರುತ್ತಿದ್ದಂತ ಸಮಸ್ಯೆಗಳು

### 3.2.1 ಸಾಮಾಜಿಕ ರಚನೆ

ಭಾರತೀಯ ಸಮಾಜದಲ್ಲಿ ಸ್ತ್ರೀಯರು ಮಗಳಾಗಿ, ತಾಯಿಯಾಗಿ, ಹೆಂಡತಿಯಾಗಿ ತನ್ನ ಪಾತ್ರವನ್ನು ನಿರ್ವಹಿಸುತ್ತಾರೆ. ಸಾಂಪ್ರದಾಯಿಕ ಕಟ್ಟುಪಾಡುಗಳಾದ ರೂಢಿ, ಸಂಪ್ರದಾಯಗಳು, ಮೂಢನಂಬಿಕೆಗಳು ಭಾರತೀಯ ಸ್ತ್ರೀಯರ ಜೀವನವನ್ನು ಬಲಿ ತೆಗೆದುಕೊಂಡಿದೆ. ತನಗಾಗುವ ಅನ್ಯಾಯವನ್ನು ಪ್ರತಿಭಟಿಸುವ ಹಕ್ಕು ಅಧಿಕಾರಗಳ ಅವಕಾಶಗಳಿದ್ದರೂ ಶೈಕ್ಷಣಿಕ ಜ್ಞಾನದಿಂದ

ವಂಚಿತರಾಗಿದ್ದಾರೆ. ಆದರೆ ಇಂದಿನ ನಾಗರೀಕ ಭಾರತೀಯ ಸ್ತ್ರೀಯರು ವೇದಾಂತ, ಸಂಪ್ರದಾಯ, ಮೂಢನಂಬಿಕೆ, ಧಾರ್ಮಿಕ ವಾಸ್ತವವಲ್ಲದ ಆಚರಣೆಗಳು, ಬಾಲ್ಯವಿವಾಹ ಪದ್ಧತಿ, ವರದಕ್ಷಿಣೆ ಮತ್ತು ಮಡಿವಂತಿಕೆ ಮುಂತಾದವುಗಳಿಂದ ವಂಚಿತರಾಗಿದ್ದಾರೆ.

ಸ್ತ್ರೀಯರ ಶಿಕ್ಷಣದಿಂದ ಸಾಮಾಜಿಕ ರಚನೆಯಲ್ಲಿ ಬದಲಾವಣೆಯಾಗಬಹುದು. ಜೊತೆಗೆ ಶಿಕ್ಷಣ ಸಮಾನತೆ, ಆಧುನಿಕತೆಗೆ ಮತ್ತು ಸಾಮಾಜಿಕ ಪುನರ್ ಸಂಘಟನೆಗೆ ದಾರಿ ಮಾಡಿಕೊಡುತ್ತದೆ. ಸ್ತ್ರೀಯರು ಶಿಕ್ಷಣ ಪಡೆಯುವುದರಿಂದ ಅವರು ಕೌಟುಂಬಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ ಪುರುಷರಿಗೆ ಸಮಾನ ಸಹಭಾಗಿಯಾಗಲು ಸಾಧ್ಯವಾಗುತ್ತದೆ. ಇಂದು ಶಿಕ್ಷಣಕ್ಕೆ ಗಣನೀಯ ಪ್ರಮಾಣದಲ್ಲಿ ವೆಚ್ಚ ಮಾಡಲಾಗುತ್ತಿದೆ.[10]

### 3.2.2 ಸಹ ಶಿಕ್ಷಣ ಪದ್ಧತಿ

ಶಿಕ್ಷಣ ಪಡೆಯುವಲ್ಲಿದ್ದಂತ ಸಮಸ್ಯೆಯೆಂದರೆ ಸಹ ಶಿಕ್ಷಣ ಪದ್ಧತಿ, ಪ್ರಾಚೀನ ಸಮಾಜದಲ್ಲಿ ಧಾರ್ಮಿಕ ಮಡಿವಂತಿಕೆಯ ವಾತಾವರಣವಿದ್ದು, ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುತ್ತಿರಲಿಲ್ಲ. ಅದರಲ್ಲಿಯೂ ಶಿಕ್ಷಣ ಪದ್ಧತಿಯಲ್ಲಿ ಸಹ ಶಿಕ್ಷಣ ಒಂದು ಸಮಸ್ಯೆಯಾಗಿದೆ. ಶಿಕ್ಷಣದ ವಿಚಾರವಾಗಿ ವಿಶ್ವದಾದ್ಯಂತ ಭಿನ್ನ-ವಿಭಿನ್ನಾಭಿಪ್ರಾಯಗಳು ವ್ಯಕ್ತಪಟ್ಟಿವೆ.

ಉದಾಹರಣೆ: ಅಮೇರಿಕಾ, ರಶಿಯಾ, ಪಶ್ಚಿಮ ಜರ್ಮನಿ, ಇಟಲಿ ದೇಶಗಳಲ್ಲಿ ಸಹ ಶಿಕ್ಷಣ ಒಂದು ಮಾದರಿ ಪದ್ಧತಿಯಾಗಿ ಮುಂದುವರೆಯುತ್ತಿದೆ. ಇಂಗ್ಲೇಂಡ್, ಆಸ್ಟ್ರೇಲಿಯಾ, ಫ್ರಾನ್ಸ್ ಮತ್ತು ಜಪಾನ್‌ಗಳಲ್ಲಿ ಸ್ತ್ರೀ ಶಿಕ್ಷಣ ಶಾಲಾ ಕಾಲೇಜು ಇದ್ದರೂ, ಸಹ ಶಿಕ್ಷಣ ಶಾಲಾ ಕಾಲೇಜುಗಳು ಅಪರೂಪಕ್ಕೆ ಅಲ್ಲೊಂದು ಇಲ್ಲೊಂದು ಕಂಡು ಬರುತ್ತವೆ.

ಭಾರತದಲ್ಲಿಯೂ ಸಹ ಶಿಕ್ಷಣ ಹೆಚ್ಚು ಕಡಿಮೆ ಜಾರಿಯಲ್ಲಿರುವ ಕ್ರಾಂತಿಕಾರಿ ಶಿಕ್ಷಣ ಪದ್ಧತಿಯಾಗಿದೆ. ಅದರಲ್ಲಿ ಕೆಲವು ರಾಜ್ಯಗಳಾದ ತಮಿಳುನಾಡು, ಉತ್ತರಪ್ರದೇಶ, ರಾಜಸ್ಥಾನ, ಪಂಜಾಬ್, ಜಮ್ಮು ಮತ್ತು ಕಾಶ್ಮೀರ, ಮತ್ತು ದೆಹಲಿಗಳಲ್ಲಿ ಸಹ ಶಿಕ್ಷಣ ಜಾರಿಯಲ್ಲಿದ್ದು, ಜೊತೆಗೆ ಹೆಣ್ಣುಮಕ್ಕಳ ಶಾಲಾ ಕಾಲೇಜುಗಳಿದ್ದವು. ಕೇರಳ, ಮಹಾರಾಷ್ಟ್ರ, ಕರ್ನಾಟಕ, ಮಧ್ಯಪ್ರದೇಶ, ಗುಜರಾತ್, ಆಂಧ್ರಪ್ರದೇಶ, ಪಶ್ಚಿಮ ಬಂಗಾಲ ರಾಜ್ಯಗಳಲ್ಲಿ ಸಹ ಶಿಕ್ಷಣ ಪ್ರಮುಖವಾಗಿದ್ದಿತು.

ಪ್ರಾಚೀನ ಕಾಲದಲ್ಲಿ ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಿರಲಿಲ್ಲವಾದ್ದರಿಂದ ಈ ಸಮಸ್ಯೆ ಕಂಡು ಬರುತ್ತಿರಲಿಲ್ಲ. ಅಂದು ಗುರುಕುಲ, ಆಶ್ರಮಗಳಲ್ಲಿ ಶ್ರೀಮಂತ ಸುಶಿಕ್ಷಿತ ಮೇಲ್ವರ್ಗದವರಿಗೆ ಮಾತ್ರ ಶಿಕ್ಷಣ ಸೌಲಭ್ಯ ದೊರೆಯುತ್ತಿತ್ತು. ಕೆಳ ಜಾತಿಯವರಿಗೆ ಈ ಅವಕಾಶವಿರಲಿಲ್ಲ.

ಅಂದು ಬಾಲ್ಯವಿವಾಹ ರೂಢಿಯಲ್ಲಿದ್ದು ತಮ್ಮ ಮಕ್ಕಳಿಗೆ ಚಿಕ್ಕವಯಸ್ಸಿನಲ್ಲಿಯೇ ವಿವಾಹ ಮಾಡುತ್ತಿದ್ದರಿಂದ ಶಾಲೆಯ ಕಡೆ ಅಷ್ಟು ಗಮನ ಕೊಡುತ್ತಿರಲಿಲ್ಲ. ತಮ್ಮ ಅಜ್ಞಾನದಿಂದಾಗಿ ೧೨ ವರ್ಷದ ಮೇಲ್ಪಟ್ಟ ಬಾಲಕಿಯರನ್ನು ಶಾಲೆಗೆ ಕಳುಹಿಸಲು ಹಿಂಜರಿಯುತ್ತಿದ್ದರು. ಅಂದು ಸಹ ಶಿಕ್ಷಣದ ಶಾಲೆಗಳಲ್ಲಿ ಕೆಲವೇ ಮಂದಿ ಅದರ ಪ್ರಯೋಜನ ಪಡೆದುಕೊಳ್ಳುತ್ತಿದ್ದರು. ಧಾರ್ಮಿಕ ಮಡಿವಂತಿಕೆಯ ವಾತಾವರಣವಿದ್ದು ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಮಹತ್ವ ಕೊಡುತ್ತಿರಲಿಲ್ಲ.

ಇತ್ತೀಚಿನ ದಿನಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಶಿಕ್ಷಣ ಅತ್ಯವಶ್ಯಕ ಅಂಶವಾಗಿದ್ದು, ಸಹ ಶಿಕ್ಷಣ ಪದ್ಧತಿಯು ಒಂದು ಮಾದರಿ ಶಿಕ್ಷಣದ ಪದ್ಧತಿಯಾಗಿದೆ. ಸಹ ಶಿಕ್ಷಣ ಪದ್ಧತಿಯನ್ನು ಮೂರು ಹಂತಗಳಲ್ಲಿ ಶಿಕ್ಷಣ ಕೊಡುವುದಾಗಿದೆ ಅವುಗಳೆಂದರೆ ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ ಮತ್ತು ಕಾಲೇಜು ವಿಶ್ವವಿದ್ಯಾಲಯ ಶಿಕ್ಷಣ. ಈ ಮೂರು ಹಂತಗಳಲ್ಲಿ ಕೊಡುವುದರಿಂದ ಶಿಕ್ಷಣದಿಂದ ಎಚ್ಚೆತ್ತ ಮಹಿಳೆ ಪುರುಷ ಸಮಾನ ಹಕ್ಕುಗಳನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ಪಡೆಯುತ್ತಿದ್ದಾರೆ. ಸ್ತ್ರೀ ಪುರುಷರಿಬ್ಬರೂ ರಾಷ್ಟ್ರವೆಂಬ ರಥಕ್ಕೆ ಎರಡು ಗಾಲಿಗಳಿದ್ದಂತೆ. ಒಂದು ಇನ್ನೊಂದಕ್ಕೆ ಪೂರಕವಾಗೆಯೇ ದೇಶದ ಚರಿತ್ರೆಯಲ್ಲಿ ನಾಗರೀಕತೆ ಸ್ತ್ರೀ ಪುರುಷರಿಬ್ಬರ ಸಮನ್ವಯ ಸುಂದರ ಚರಿತ್ರೆಯ ಸಂಕೇತ.[11]

### 3.2.3 ಶೈಕ್ಷಣಿಕ ವ್ಯವಸ್ಥೆ

ಭಾರತದಲ್ಲಿ ಸುಮಾರು ಶೇಕಡ 70ರಷ್ಟು ಜನರು ಗ್ರಾಮೀಣ ಪ್ರದೇಶದಲ್ಲಿಯೇ ವಾಸಿಸುತ್ತಿದ್ದು, ವಿಭಿನ್ನ ರೂಢಿ ಸಂಪ್ರದಾಯಗಳನ್ನು ಅವಲಂಭಿಸಿದ್ದಾರೆ. ಶಿಕ್ಷಣ ಕ್ರಮದಲ್ಲಿ ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ಬಹಳಷ್ಟು ವ್ಯತ್ಯಾಸವಿದೆ. ಈ ವ್ಯತ್ಯಾಸಗಳು ದೇಶದಾದ್ಯಂತ ವಿಭಿನ್ನ ಸ್ವರೂಪದ್ದಾಗಿದೆ. ಬಹಳಷ್ಟು ವಿಶ್ವವಿದ್ಯಾಲಯಗಳು ನಗರಗಳಲ್ಲಿಯೇ ಕೇಂದ್ರೀಕೃತವಾಗಿವೆ.

ಇದರಿಂದ ಗ್ರಾಮೀಣ ಜನರು ತಮ್ಮ ಮಕ್ಕಳನ್ನು ನಗರಪ್ರದೇಶಗಳಿಗೆ ಕಳುಹಿಸಲು ಇಷ್ಟಪಡುವುದಿಲ್ಲ. ಇದರಿಂದ ಸ್ತ್ರೀಯರು ಶೈಕ್ಷಣಿಕವಾಗಿ ಹಿಂದುಳಿಯಲು ಕಾರಣವಾಗಿ ಶೈಕ್ಷಣಿಕ ವ್ಯವಸ್ಥೆಯು ಒಂದು ಸಮಸ್ಯೆಯಾಗಿದೆ.

### 3.2.4 ಆರ್ಥಿಕ ಪರಿಸ್ಥಿತಿ

ಪುರಾತನ ಕಾಲದಿಂದಲೂ ಅಸ್ಪೃಶ್ಯ ಜಾತಿಗೆ ಸೇರಿದವರು ಮೇಲಿನ ವರ್ಗದ ಸೇವೆ ಮಾಡಿಕೊಂಡು ಅವರ ಕರುಣೆಯಲ್ಲಿಯೇ ಜೀವನ ನಡೆಸಬೇಕಾಗಿದಿತ್ತು. ಇವರಿಗೆ ಯಾವುದೇ ರೀತಿಯ ಹಕ್ಕು ಬಾದ್ಯತೆಗಳಿಲ್ಲದೆ ಇವರು ಆರ್ಥಿಕ ಸಮಸ್ಯೆಯನ್ನು ಎದುರಿಸಬೇಕಾಯಿತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮಕ್ಕಳನ್ನು ಶಾಲೆಗೆ ಸೇರಿಸುವುದು ಕಷ್ಟಕರವಾಗಿದ್ದಿತು. ಸಾಮಾನ್ಯವಾಗಿ ಬಡತನದಿಂದ ಕೂಡಿದ ಕುಟುಂಬದಲ್ಲಿ ತಮ್ಮ ಮಕ್ಕಳನ್ನು ಮೇಲ್ವರ್ಗದವರ ಮನೆಯಲ್ಲಿ ಚೀತ್ಕರಿಸುತ್ತಿದ್ದರು. ಇಂತಹ ಕುಟುಂಬಗಳಿಂದ ಮಕ್ಕಳು ವಿದ್ಯಾಭ್ಯಾಸ ಮಾಡುವುದು ಕಷ್ಟಸಾದ್ಯವಾಗಿತ್ತು. ಆದರೂ ಇವರು ಗಂಡು ಮಕ್ಕಳಿಗೆ ಮಾತ್ರ ಶಿಕ್ಷಣಕ್ಕೆ ಹೆಚ್ಚಿನ ಉತ್ತೇಜನ ನೀಡುತ್ತಿದ್ದರು. ಆದರೆ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡುತ್ತಿರಲಿಲ್ಲ. ಇವರಲ್ಲಿ ಬೇರೂರಿದ್ದ ಅಂಶವೆಂದರೆ ''ಹೆಣ್ಣು ಮಕ್ಕಳು ಶಿಕ್ಷಣ ಪಡೆದು ಸಾಧಿಸುವುದಾದರೂ ಏನು'' ಎಂಬ ಮನೋಭಾವನೆಯನ್ನು ಬೆಳೆಸಿಕೊಂಡಿದ್ದರು. ಆರ್ಥಿಕವಾಗಿ ಸ್ತ್ರೀಯರು ಪುರುಷರನ್ನೇ ಅವಲಂಭಿಸಿದ್ದು ಆರ್ಥಿಕ ಸ್ವಾವಲಂಬನೆ ಇರುವುದಿಲ್ಲ. ಎಲ್ಲಾ ಜವಾಬ್ದಾರಿಯನ್ನು ಕುಟುಂಬದ ಹಿರಿಯ ವ್ಯಕ್ತಿಯೇ ನೋಡಿಕೊಳ್ಳಬೇಕಾಗಿದ್ದಿತು.

ಈ ಎಲ್ಲಾ ಸಮಸ್ಯೆಗಳಿಂದ ಮುಕ್ತವಾಗಿ ಪರಿಶಿಷ್ಟ ಜಾತಿಯ ಸ್ತ್ರೀಯರು ಸಹ ಶಿಕ್ಷಣ ಪಡೆಯುವಂತಾದರು. ಇಲ್ಲಿ ವಿದ್ಯಾರ್ಥಿಗಳಿಗೆ ಎದುರಾಗುವ ಸಮಸ್ಯೆ, ಆರ್ಥಿಕ ಸಮಸ್ಯೆಯಾಗಿದೆ. ಪ್ರಮುಖವಾಗಿ ಹಣದ ಅವಶ್ಯಕತೆಯಿರುವುದರಿಂದ ಪ್ರತಿಯೊಂದು ಹಂತದಲ್ಲೂ ಸಹ ಇದು ನಿರಾಸೆಗೊಳಿಸುತ್ತದೆ. ಆರ್ಥಿಕವಾಗಿ ಉತ್ತಮವಾಗಿರುವವರ ಜೊತೆಯಿರುವಾಗ ಹಲವು ಮಾನಸಿಕ ಹಿಂಸೆಗಳಿಗೆ ಒಳಗಾಗಬೇಕಾಗುತ್ತದೆ.

ಶೋಷಣೆಯಿಂದ ಎಲ್ಲಾ ರೀತಿಯಲ್ಲೂ ಕೀಳಾಗಿ ಕಂಡಿರುವ ಈ ಜನ ಆರ್ಥಿಕವಾಗಿ ಬಹಳ ಹಿಂದುಳಿದಿದ್ದು ಶಿಕ್ಷಣ ಪಡೆಯುವಲ್ಲಿ ಸಮಸ್ಯೆಯನ್ನುಂಟು ಮಾಡಿದೆ. ಅವರನ್ನು ಶೈಕ್ಷಣಿಕವಾಗಿ ಅಭಿವೃದ್ಧಿಪಡಿಸಲು ಸರ್ಕಾರ ಹಲವು ರೀತಿಯಲ್ಲಿ ಧನ ಸಹಾಯ ನೀಡುತ್ತಿದೆ. ಇದು ಎಷ್ಟರಮಟ್ಟಿಗೆ ಅವರ ಕೈ ಸೇರುವುದೋ, ಅದನ್ನು ಯಾವ ರೀತಿ ಬಳಸಿಕೊಳ್ಳುತ್ತಾರೋ ಎಂಬುದು ಪ್ರಶ್ನಾರ್ಥಕವಾಗಿದೆ.

ಸ್ತ್ರೀಯರ ಶಿಕ್ಷಣಕ್ಕೆ ಹಲವಾರು ಸಮಸ್ಯೆಗಳಿದ್ದರಿಂದ ಬ್ರಿಟಿಷ್ ಅಧಿಕಾರಿಗಳು ಹೆಣ್ಣು ಮಕ್ಕಳಿಗಾಗಿಯೇ ಪ್ರತ್ಯೇಕ ಶಾಲೆಗಳನ್ನು ತೆರೆಯಲು ಪ್ರಾರಂಭಿಸಿದರು. ಅಲ್ಲದೆ ಇವರಿಗೆ ಬೋಧನೆ ನೀಡಲು ಮಹಿಳಾ ಶಿಕ್ಷಕಿಯರನ್ನೇ ನೇಮಕ ಮಾಡಲಾಗುತ್ತಿತ್ತು.

ಸ್ವಾತಂತ್ರ್ಯ ನಂತರದಲ್ಲಿ ಗ್ರಾಮೀಣ ಶಿಕ್ಷಣಕ್ಕೆ ವಿಶೇಷ ಗಮನವನ್ನು ನೀಡಲಾಗಿದೆ. ಇದರಿಂದಾಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಸ್ತ್ರೀಯರ ಪ್ರಗತಿಯನ್ನು ಕಾಣಲಾಗಿದೆ. ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿರುವುದರಿಂದ ತಮ್ಮ ಜೀವನವನ್ನು ತಾವೇ ರೂಪಿಸಿಕೊಳ್ಳುವಂತಹ ಅವಕಾಶ ಸಾಧ್ಯವಾಗಿದೆ.

ಮಜುಂದಾರ್‌ರವರು ಆರ್ಥಿಕ ಒತ್ತಾಯ ಇಲ್ಲದಿರುವುದೇ ಈ ದೇಶದ ಮಹಿಳಾ ಶಿಕ್ಷಣದ ಬೆಳವಣಿಗೆಯು ಮುಂದಗತಿಯಲ್ಲಿರಲು ಕಾರಣವಾಗಿದೆ. ಆದ್ದರಿಂದ ಸ್ತ್ರೀಯರು ಸಾಮಾಜಿಕ ವಿಷಯಗಳಲ್ಲಿ ಭಾಗವಹಿಸಲು ಆಸಕ್ತರಾಗಿರುವುದಿಲ್ಲ. ವಸಾಹತು ಆಡಳಿತದಲ್ಲಿಯೂ ಸಾಮಾನ್ಯವಾಗಿ ಮಹಿಳೆಯರ ಶಿಕ್ಷಣವನ್ನು ಸಹಕಾರಿ ಹಾಗೂ ಸೀಮಿತ ದೃಷ್ಟಿಕೋನದಿಂದ ನೋಡುತ್ತಾರೆ. ಸ್ವಾತಂತ್ರ್ಯೋತ್ತರದ ಕಾಲದಲ್ಲಿ ಶಿಕ್ಷಣಕ್ಕೆ ಹೊಸ ಆಯಾಮ ನೀಡಲಾಯಿತು.

ಭಾರತ ಸರ್ಕಾರವು ಸ್ತ್ರೀಯರಿಗೆ ಸಮಾನತೆಯನ್ನು ನೀಡುವುದರಿಂದ ಸ್ತ್ರೀಯರು ಬಹುಮುಖ್ಯವಾದಂತಹ ಪಾತ್ರವನ್ನು ವಹಿಸುತ್ತಾರೆ. ಆದ್ದರಿಂದ ಸ್ತ್ರೀಯರಿಗೆ ಪುರುಷ ಸಮಾನವಾದ ಶಿಕ್ಷಣವನ್ನು ನೀಡಬೇಕು. ಇದರಲ್ಲಿ ಸ್ತ್ರೀ ಪುರುಷರ ಶಿಕ್ಷಣದಲ್ಲಿ ಸಾಮಾನ್ಯ ಉದ್ದೇಶಗಳ ವ್ಯತ್ಯಾಸ ಕಂಡುಬರುವುದಿಲ್ಲ. ಇದರಿಂದಾಗಿ ಸ್ತ್ರೀಯರಿಗೆ ಪ್ರೌಢ ಮತ್ತು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣವನ್ನು ನೀಡಬೇಕು. ಜೊತೆಗ ವೃತ್ತಿಪರ ಹಾಗೂ ತಾಂತ್ರಿಕ ಶಿಕ್ಷಣವನ್ನು ನೀಡಬೇಕು. ಇದರಿಂದ ಸ್ತ್ರೀಯರು ಸಾಮಾಜಿಕ ಮತ್ತು ಆರ್ಥಿಕ ಜವಾಬ್ದಾರಿಯನ್ನು ಪುರುಷರಲ್ಲಿ ಹಂಚಿಕೊಳ್ಳಬಹುದು.

ಪುರುಷ ಸಹಭಾಗಿತ್ವ ಜೀವನ ನಡೆಸಲು ಸಾಧ್ಯವಾಗುತ್ತದೆ. ಅಲ್ಲದೆ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ ಅಂತಸ್ತು ನಿರ್ಧರಿಸಿದಂತಾಗುತ್ತದೆ.[12]

ಸ್ತ್ರೀಯರು ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಪಡೆಯಲು ಶಿಕ್ಷಣವು ಅತ್ಯಂತ ಪ್ರಮುಖವಾದುದು. ಸಸ್ತ್ರೀಯರ ಅಂತಸ್ತು ಮತ್ತು ಬೆಳವಣಿಗೆಗೆ ಶಿಕ್ಷಣದ ಅವಶ್ಯಕತೆಯಿದೆ. ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚಿನ ಅವಕಾಶಗಳನ್ನು ನೀಡುವುದರಿಂದ ಸಮಾಜದಲ್ಲಿ ಉತ್ತಮ ಸ್ಥಾನವನ್ನು ಪಡೆಯಬಹುದು. ಸ್ತ್ರೀಯರಿಗೆ ಶಿಕ್ಷಣವು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಉದ್ದೇಶಗಳಿಗಲ್ಲದೆ, ಸ್ತ್ರೀಯರು ಸಮಾಜದಲ್ಲಿ ನಿರ್ವಹಿಸುವಂತಹ ಪಾತ್ರಗಳಿಗೆ ಹಾಗೂ ಸ್ಥಾನಮಾನಗಳಿಗೆ ಶಿಕ್ಷಣದ ಅವಶ್ಯಕತೆಯಿದೆ.



### 3.2.5 ಉನ್ನತ ಶಿಕ್ಷಣದ ಸಮಸ್ಯೆಗಳು

ಪರಿಶಿಷ್ಟ ಜಾತಿಯ ಸ್ತ್ರೀಯರ ಶಿಕ್ಷಣದ ಸಾಧನೆಯಿಂದ ಅನೇಕ ರೀತಿಯಲ್ಲಿ ಬದಲಾವಣೆಗಳಾಗಿವೆ. ಇದು ನಗರ ಮತ್ತು ಗ್ರಾಮಗಳಲ್ಲಿ ಬಹಳ ವ್ಯತ್ಯಾಸಗಳಿಂದ ಕೂಡಿದೆ. ಗ್ರಾಮೀಣ ಪ್ರದೇಶದ ಮಹಿಳೆಯರಿಗಿಂತ ನಗರಗಳಲ್ಲಿ ವಾಸಿಸುವಂತಹ ಮಹಿಳೆಯರಿಗೆ ಹೆಚ್ಚಿನ ಅನುಕೂಲವಾಗುತ್ತಿದೆ.

ಭಾರತವು ಗ್ರಾಮೀಣ ಪ್ರದೇಶಗಳಿಂದ ಕೂಡಿದ್ದು ಹೆಚ್ಚಿನ ಶೈಕ್ಷಣಿಕ ಸೌಲಭ್ಯವು ನಗರಗಳಲ್ಲಿ ಕೇಂದ್ರೀಕೃತವಾಗಿವೆ. ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣ ಪಡೆಯುತ್ತಿರುವ ಸ್ತ್ರೀಯರು ಶಾಲಾ-ಕಾಲೇಜುಗಳಲ್ಲಿ ಅನೇಕ ಸಮಸ್ಯೆಗಳನ್ನೆದುರಿಸುತ್ತಿದ್ದಾರೆ. ನಗರ-ಗ್ರಾಮೀಣ ಪ್ರದೇಶಗಳಿಂದ ಉನ್ನತ ಶಿಕ್ಷಣಕ್ಕಾಗಿ ಬೆಂಗಳೂರು ವಿಶ್ವವಿದ್ಯಾಲಯ, ಜ್ಞಾನಭಾರತಿ ವಿವಿಧ ವಿಭಾಗಗಳಲ್ಲಿ ಅಧ್ಯಯನ ಮಾಡುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಮಸ್ಯೆಗಳನ್ನು ಸಂದರ್ಶನದ ಮೂಲಕ ಈ ಕೆಳಕಂಡ ಪಟ್ಟಿಯಲ್ಲಿ ವಿಶ್ಲೇಷಿಸಲಾಗಿದೆ.

## ಕೋಷ್ಟಕ-3

## ಶೈಕ್ಷಣಿಕ ಸಮಸ್ಯೆಗಳು

| ಕ್ರಮ ಸಂಖ್ಯೆ | ಸಮಸ್ಯೆಗಳ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | ಭಾಷಾಸಂಖ್ಯೆ | 23 | 38.33 | 23 |
| 2 | ಗ್ರಂಥಾಲಯದ ಸಮಸ್ಯೆ | 15 | 25.00 | 15 |
| 3 | ಆರ್ಥಿಕ ಸಮಸ್ಯೆ | 8 | 13.33 | 8 |
| 4 | ಇತರೆ | 14 | 23.33 | 14 |
| | ಒಟ್ಟು | 60 | 100.00 | 60 |

ಮೇಲಿನ ಪಟ್ಟಿಯಲ್ಲಿ ಪ್ರತಿವಾದಿಗಳ ಸಮಸ್ಯೆಗಳನ್ನು ಸೂಚಿಸಲಾಗಿದೆ. ಶೇಕಡ 38.33 ರಷ್ಟು ವಿದ್ಯಾರ್ಥಿನಿಯರಿಗೆ ಭಾಷೆಯ ಸಮಸ್ಯೆ ಕಂಡು ಬಂದಿದೆ. ಗ್ರಾಮಾಂತರ ಪ್ರದೇಶಗಳಿಂದ ಬಂದಂತಹವರು ಹೆಚ್ಚಿನವಾಗಿ ಕನ್ನಡ ಮಾಧ್ಯಮದಲ್ಲಿಯೇ ಅಧ್ಯಯನ ಮಾಡಿದ್ದು ಉನ್ನತ ಶಿಕ್ಷಣಕ್ಕಿಂದ ಮೇಲೆ ಇಂಗ್ಲೀಷ್ ಮುಖ್ಯವಾಗಿರುತ್ತದೆ. ಗ್ರಾಮಾಂತರ ಪ್ರದೇಶಗಳಿಂದ ಬಂದಂತವರಿಗೆ ಪ್ರಾಥಮಿಕ ಹಂತದಲ್ಲಿ ಗ್ರಾಂಥಿಕ ಭಾಷೆಗೆ ಹೊಂದಿಕೊಳ್ಳುವುದು ಕಷ್ಟವಾಗುತ್ತದೆ. ಉನ್ನತ ಶಿಕ್ಷಣದಲ್ಲಿ ಇಂಗ್ಲೀಷ್ ಭಾಷೆಯ ಉಪ್ರಮುಖಸ್ಥಾನವನ್ನು ವಹಿಸಿದ್ದು ಭಾಷಾ ಸಮಸ್ಯೆಯು ಕಂಡುಬಂದಿದೆ ಎಂದಿದ್ದಾರೆ.

ಶೇಕಡ 25 ರಷ್ಟು ವಿದ್ಯಾರ್ಥಿನಿಯರಿಗೆ ಗ್ರಂಥಾಲಯದ ಸಮಸ್ಯೆ ಕಂಡು ಬಂದಿದೆ ಎಂದಿದ್ದಾರೆ. ಶೈಕ್ಷಣಿಕ ಸಮಯದಲ್ಲಿ ವಿದ್ಯಾರ್ಥಿಗಳಿಗೆ ಗ್ರಂಥಾಲಯವು ಅತ್ಯಂತ ಪ್ರಮುಖವಾದುದು. ಬಹಳಷ್ಟು ವಿದ್ಯಾರ್ಥಿನಿಯರಿಗೆ ಗ್ರಂಥಾಲಯದ ಸಮಸ್ಯೆಯು ಕಂಡು ಬಂದಿದ್ದು ಬಡತನದಿಂದ ಬಂದಂತವರು ಆರ್ಥಿಕವಾಗಿ ತಮಗೆ ಅಗತ್ಯವಾದ ಪುಸ್ತಕಗಳನ್ನು ಕೊಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಅಂತಹ

ಸಮಯದಲ್ಲಿ ಗ್ರಂಥಾಲಯವೇ ಜೀವನಾಡಿಯಾಗಿದೆ. ಆಗಾಗಿ ಗ್ರಂಥಾಲಯವನ್ನು ಬಳಸಿಕೊಳ್ಳುವುದು ಸೂಕ್ತವಾಗಿದ್ದು, ಕನ್ನಡ ಮಾಧ್ಯಮಗಳಿಂದ ಬಂದಿರುವಂತಹ ವಿದ್ಯಾರ್ಥಿನಿಯರಿಗೆ ಬೇಕಾದ ಕನ್ನಡ ಮಾಧ್ಯಮದ ಪುಸ್ತಕಗಳು ಇಲ್ಲದಿರವುದು ಅಗತ್ಯವಾಗಿರುವ ಪುಸ್ತಕಗಳಲ್ಲಿ ಪುಟಗಳಿಲ್ಲದಿರುವುದು ಕೊಂಡುಕೊಳ್ಳಲು ಸಾಧ್ಯವಾಗದಂತಹ ಅದಿಕ ಬೆಲೆಯಿರುವ ಪುಸ್ತಕಗಳು ಸಿಗುವುದೇ ಇಲ್ಲ ಎಂದಿದ್ದಾರೆ.

ಶೇಕಡ ೧೩.೩೩ರಷ್ಟು ಆರ್ಥಿಕ ಸಮಸ್ಯೆಯಿದ್ದು ಇವರು ಇಂದಿಗೂ ಸರ್ಕಾರದ ಸೌಲಭ್ಯದಿಂದಲೇ ವಿದ್ಯಾಭ್ಯಾಸ ಮಾಡುತ್ತಿರುವುದಾಗಿ ತಿಳಿಸಿದ್ದಾರೆ. ಶೇಕಡ ೨೩.೩೩ರಷ್ಟು ವಿದ್ಯಾರ್ಥಿನಿಯರು ಇತರೆ ಸಮಸ್ಯೆ (ಪರಿಸರ-ಸಮಯ-ವೈಯಕ್ತಿಕ) ಗಳಿವೆ ಎಂದಿದ್ದಾರೆ. ಇದರಲ್ಲಿ ತಿಳಿದುಬರುವಂತಹ ಅಂಶವಂದರೆ, ಶೇಕಡ ೩೮.೩೩ರಷ್ಟು ವಿದ್ಯಾರ್ಥಿನಿಯರಿಗೆ ಭಾಷಾ ಸಮಸ್ಯೆ ಹಾಗೂ ಶೇಕಡ ೨೫ರಷ್ಟು ವಿದ್ಯಾರ್ಥಿನಿಯರಿಗೆ ಗ್ರಂಥಾಲಯದ ಸಮಸ್ಯೆ ಕಂಡು ಬಂದಿದೆ.

ಶಿಕ್ಷಣ ಪಡೆಯಲು ಅನೇಕ ಕಾರಣಗಳಿದ್ದು ಉನ್ನತ ಶಿಕ್ಷಣ ಪಡೆಯಲು ಕಾರಣ, ಉದ್ದೇಶಗಳ ಬಗ್ಗೆ ಸಂದರ್ಶಿಸಿದಾಗ ಪ್ರತಿವಾದಿಗಳ ಅಭಿಪ್ರಾಯವನ್ನು ಈಕೆಳಕಂಡ ಪಟ್ಟಿಯಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ-4**

**ಉನ್ನತ ಶಿಕ್ಷಣ ಪಡೆಯಲು ಕಾರಣ**

| ಕ್ರಮ ಸಂಖ್ಯೆ | ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | ಉದ್ಯೋಗ | 28 | 43.66 | 28 |
| 2 | ಉನ್ನತ ಸ್ಥಾನಮಾನ | 9 | 15.00 | 9 |
| 3 | ವಿವಾಹ | 5 | 8.33 | 5 |
| 4 | ಆರ್ಥಿಕ ಸ್ವಾವಲಂಬನೆ | 12 | 20.00 | 12 |
| 5 | ಇತರೆ | 6 | 10.00 | 6 |
| | ಒಟ್ಟು | 60 | 100.00 | 60 |

ಮೇಲಿನ ಪಟ್ಟಿಯಲ್ಲಿ ಶಿಕ್ಷಣ ಪಡೆಯಲು ಕಾರಣಗಳನ್ನು ಸೂಚಿಸಲಾಗಿದೆ. ಶೇಕಡ ೪೬.೬೬ರಷ್ಟು ಉನ್ನತ ಉದ್ಯೋಗವನ್ನು ಪಡೆಯಲು ಉನ್ನತ ಸ್ಥಾನಮಾನವನ್ನು ಗಳಿಸಲು ಶೇಕಡ ೧೫ರಷ್ಟು ವಿದ್ಯಾರ್ಥಿನಿಯರು ಶೇಕಡ ೮.೩೩ರಷ್ಟು ವಿದ್ಯಾರ್ಥಿನಿಯರು ವಿವಾಹಕ್ಕಾಗಿ ಶೇಕಡ ೨೦ರಷ್ಟು ವಿದ್ಯಾರ್ಥಿನಿಯರು ಆರ್ಥಿಕ ಸ್ವಾವಲಂಭನೆಗಾಗಿ ಶೇಕಡ ೧೦ರಷ್ಟು ವಿದ್ಯಾರ್ಥಿನಿಯರು ಇತರ ಉದ್ದೇಶಕ್ಕಾಗಿ ಶಿಕ್ಷಣವನ್ನು ಪಡೆಯುತ್ತಿದ್ದೇವೆ ಎಂದಿದ್ದಾರೆ.

ಇಲ್ಲಿ ಗಮನಿಸಬೇಕಾದ ಪ್ರಮುಖವಾದ ಅಂಶವೆಂದರೆ, ಬಹಳಷ್ಟು ವಿದ್ಯಾರ್ಥಿನಿಯರು ಉದ್ಯೋಗಕ್ಕಾಗಿ, ಉನ್ನತ ಸ್ಥಾನಮಾನಕ್ಕಾಗಿ ಶಿಕ್ಷಣ ಪಡಯುತ್ತಾರೆ. ಮೊದಲನೆಯ ಸ್ಥಾನದಲ್ಲಿ ಉದ್ಯೋಗಕ್ಕಾಗಿ ಶಿಕ್ಷಣ ಪಡೆಯುತ್ತಿರುವುದು ಕಂಡು ಬರುತ್ತದೆ.

ಸ್ತ್ರೀಯರು ವೈಚಾರಿಕ ಮನೋಭಾವದಿಂದ ಶಿಕ್ಷಣ ಪಡೆದು ಉನ್ನತ ಹುದ್ದೆಗೆ ಹೋಗಬೇಕು. ಹಾಗೆಯೇ ಸಮಾಜದಲ್ಲಿ ಉನ್ನತ ಸ್ಥಾನಮಾನ ಪಡೆಯುವ ಉದ್ದೇಶವನ್ನಿಟ್ಟುಕೊಂಡು ಅನೇಕ ಸ್ತ್ರೀಯರು ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರಗಳಲ್ಲಿ ಉದ್ಯೋಗದ ಪಡೆದುಕೊಂಡಿದ್ದಾರೆ.

ಉನ್ನತ ಶಿಕ್ಷಣ ಪಡೆಯುತ್ತಿರುವ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಉದ್ಯೋಗದ ಆಯ್ಕೆಯ ಬಗ್ಗೆ ಸಂದರ್ಶಿಸಿದಾಗ ಅವರ ಅಭಿಪ್ರಾಯ ಈ ರೀತಿಯಲ್ಲಿದೆ.

### ಕೋಷ್ಟಕ-5

### ಉದ್ಯೋಗದ ಆಯ್ಕೆಯ ಪಟ್ಟಿ

| ಕ್ರಮ ಸಂಖ್ಯೆ | ಉದ್ಯೋಗಗಳ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | ಉಪನ್ಯಾಸಕಿಯರು | 20 | 33.33 | 20 |
| 2 | ಆಡಳಿತಗಾರರು | 7 | 11.66 | 7 |
| 3 | ಇತರೆ | 35 | 5.00 | 35 |
| | ಒಟ್ಟು | 60 | 100.00 | 60 |

ಈ ಮೇಲಿನ ಪಟ್ಟಿಯಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಉದ್ಯೋಗದವನ್ನು ಸೂಚಿಸಲಾಗಿದೆ. ಶೇಕಡ ೩೩.೩೩ರಷ್ಟು ವಿದ್ಯಾರ್ಥಿನಿಯರು ಉಪನ್ಯಾಸಕಿಯರಾಗಿಯೂ ಶೇಕಡ ೧೧.೬೬ರಷ್ಟು ಆಡಳಿತಗಾರರಾಗಿಯೂ, ಶೇಕಡ ೫೫ರಷ್ಟು ವಿದ್ಯಾರ್ಥಿನಿಯರು ಇತರೇ ಯಾವುದೇ ವಿದ್ಯಾರ್ಹತೆಗೆ ತ ಕ್ಕಂತೆ ಸರ್ಕಾರಿ ಕ್ಷೇತ್ರದಲ್ಲಿ ಕೆಲಸವನ್ನು ನಿರ್ವಹಿಸಲು ಶಿಕ್ಷಣವನ್ನು ಪಡೆಯುತ್ತಿದ್ದಾರೆ.ಹೆಚ್ಚಿನದಾಗಿ ಸರ್ಕಾರಿ ವಲಯದಲ್ಲಿ ಕೆಲಸ ನಿರ್ವಹಿಸುವಂತಹವರು ಕಂಡು ಬಂದಿದ್ದಾರೆ.

ಪರಿಶಿಷ್ಟ ಜಾತಿಯ ಜನರಿಗೆ ಹಿಂದೆ ಅನೇಕ ಸಮಸ್ಯೆಗಳಿದ್ದವು. ಅವುಗಳನ್ನು ಪ್ರತಿಭಟಿಸುವ ಶಕ್ತಿಯಿರಲಿಲ್ಲ. ಏಕೆಂದರೆ ಇವರು ಅಕ್ಷರ ಜ್ಞಾನದಿಂದ ವಂಚಿತರಾಗಿದ್ದರು. ಇಂದು ಆ ಸಮಸ್ಯೆಗಳನ್ನೆದುರಿಸುವ ಶಕ್ತಿಯನ್ನು ಪಡೆದುಕೊಂಡಿದ್ದಾರೆ. ಆದರೂ ಸಮಸ್ಯೆಗಳಿಲ್ಲ ಎಂದು ಭಾವಿಸಲು ಸಾಧ್ಯವಿಲ್ಲ. ಸಮಸ್ಯೆಗಳೆಷ್ಟು ಕಂಡುಬಂದರೂ ಮೊದಲಿನಷ್ಟು ಜಟಿಲವಾಗಿರುವುದಿಲ್ಲ.

### 3.2.6 ಶಿಕ್ಷಣದಿಂದಾದ ಬದಲಾವಣೆ

ಬದಲಾವಣೆಯು ನಿಸರ್ಗದ ನಿಯಮ. ಸಮಾಜದಲ್ಲಿ ಬದಲಾವಣೆಯು ಒಂದಲ್ಲ ಒಂದು ರೀತಿಯಲ್ಲಿ ಕಂಡುಬರುತ್ತದೆ. ಆಧುನಿಕ ವಿಜ್ಞಾನ, ತಂತ್ರಜ್ಞಾನ, ಜೀವನದ ಎಲ್ಲಾ ಹಂತದಲ್ಲಿಯೂ ಸ್ಪಂದಿಸುತ್ತಿವೆ. ಪ್ರಪಂಚದ ಎಲ್ಲಾ ಭಾಗದಲ್ಲಿಯೂ ಹೊಸ ಹೊಸ ಅವಿಷ್ಕಾರ ಮತ್ತು ಸಂಶೋಧನೆ ಮಾಡಲಾಗುತ್ತಿದೆ. ಇದಕ್ಕೆಕಾರಣ ಶಿಕ್ಷಣ ಶಿಕ್ಷಣವು ಸಾಮಾಜಿಕ ಬದಲಾವಣೆಗೆ ಉಪಕರಣವಿದ್ದಂತೆ.

ಶೈಕ್ಷಣಿಕ ವ್ಯತ್ಯಾಸವನ್ನು ಕಡಿಮೆ ಮಾಡುವುದರಿಂದ ಕೆಳವರ್ಗ ಮತ್ತು ಮೇಲ್ವರ್ಗದ ವ್ಯತ್ಯಾಸಶನ್ನು ತೊಡೆದು ಹಾಕಲು ಸಾಧ್ಯ. ಶಿಕ್ಷಣದಿಂದಾಗಿ ಒಬ್ಬ ವ್ಯಕ್ತಿ ಹೆಚ್ಚು ಸಾಮರ್ಥ್ಯ ಮತ್ತು ಸದಸ್ಯತ್ವ ಪಡೆದುಕೊಳ್ಳುತ್ತಾನೆ. ಶಿಕ್ಷಣ ಮತ್ತು ಸಾಮಾಜಿಕ ಸ್ತರ ವಿನ್ಯಾಸದ ನಡುವೆ ಅಂತರ್ ಕ್ರಿಯೆಯಿಂದಾಗಿ ಸಾಮಾಜಿಕ ಚಲನೆಯ ಮೇಲೆ ಹೆಚ್ಚು ಪರಿಣಾಮ ಬೀರುತ್ತದೆ. ಸಮಾಜದಲ್ಲಿ ಪರಿಶಿಷ್ಟ ಜಾತಿಯವರು ಮುಂದುವರಿಯಲು ಸಾಮಾಜಿಕ ಚಲನೆಯಿಂದ ಸಾಧ್ಯ. ಸಾಮಾಜಿಕ ಚಲನೆ ಶಿಕ್ಷಣದಿಂದ ಸಾಧ್ಯ.

ಶಿಕ್ಷಣವು ಜನರ ಜೀವನ ಮಟ್ಟದಲ್ಲಿ ಸುಧಾರಣೆ ತರುವುದರ ಜೊತೆ ಜೊತೆಗೆ ಅವರಲ್ಲಿ ವೈಚಾರಿಕ ಪ್ರಜ್ಞೆಯ ಬೆಳವಣಿಗೆ ಅಸ್ಪೃಶ್ಯತೆಯ ನಿವಾರಣೆ, ಜಾತ್ಯಾತೀತತೆಯ ಕಲ್ಪನೆಯಲ್ಲಿ ಶಿಕ್ಷಣ ಪ್ರಮುಖ ಪಾತ್ರವಹಿಸಿದೆ.

ಗ್ರಾಮೀಣ ಜನರಜೀವನದಲ್ಲಿ ಅನೇಕ ರೀತಿಯಲ್ಲಿ ಬದಲಾವಣೆಯಾಗಿದೆ. ಇಂದು ಗ್ರಾಮೀಣ ಜನರು ಸಹ ತಮ್ಮ ಮಕ್ಕಳನ್ನು ಉನ್ನತ ಶಿಕ್ಷಣಕ್ಕಾಗಿ ನಗರಗಳಿಗೆ ಕಳುಹಿಸುತ್ತಿದ್ದಾರೆ. ಶಿಕ್ಷಣದಿಂದ ತಮ್ಮ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಕೆಳಜಾತಿಯ ಜನರು ಮಕ್ಕಳಿಗೆ ಶಿಕ್ಷಣ ಸಂಸ್ಥೆಯಲ್ಲಿ ಮೀಸಲಾತಿ ಸೌಲಭ್ಯಗಳನ್ನು ನಿರೀಕ್ಷಿಸುತ್ತಾರೆ. ಶಿಕ್ಷಣವು ಜೀವನದ ಎಲ್ಲಾ ಕ್ಷೇತ್ರಗಳಿಗೂ ಸಮಾಜದ ಪ್ರಗತಿಗೂ ಅವಶ್ಯಕವಾಗಿದೆ.

ಅಡಿಟಿಪ್ಪಣಿಗಳು


1. Ramsharm S. Education in Ancient Muslim Period, P-2
2. Ramsharm S. Education in Ancient Muslim Period, P-2
3 Mukkerji S.M. 'Education n India', 1969, P-162
4. Mujibul Hasan Siddque ' Women Education', 1993, P-4
5 Ram Sharm S. Education and Modernization of Women's, 1996
6 ಭಾರತದ ದೇಶಕೋಶ, ಸಂಪುಟ-4, 1948.
7 Mujibul Hasan Siddque ' Women's Education', 1993, P-5
8 University news, Nov. 6, 1995, P-11
9 University news, Nov. 12, 1997, P-14
10 University news, Jan. 22, 1996 P-18
11 ಕಲಾಲಾ. ಬಿ.ಸಿ. 'ಪುಸ್ತಕ ಶಿಕ್ಷಣದ ಸಮಸ್ಯೆಗಳು' ಪುಟ-23
12 Jyothimitra ' Women Society', P-176.

# ಅಧ್ಯಾಯ-4

# ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಆರ್ಥಿಕ ಮತ್ತು ವೈವಾಹಿಕ ಸಮಸ್ಯೆಗಳು

4.1 ಪೀಠಿಕೆ

- 4.1.1 ಕೌಟುಂಬಿಕ ಹಿನ್ನೆಲೆ
- 4.1.2 ತಂದೆಯ ವೃತ್ತಿ
- 4.1.3 ತಾಯಿಯ ವೃತ್ತಿ
- 4.1.4 ಸಹೋದರ-ಸಹೋದರಿಯರ ಶೈಕ್ಷಣಿಕ ಹಿನ್ನೆಲೆ
- 4.1.5 ಪೋಷಕರ ಆಸ್ತಿ ವಿವರ
- 4.1.6 ಪೋಷಕರ ವರಮಾನದ ಹಿನ್ನೆಲೆ
- 4.1.7 ಆರ್ಥಿಕ ಸಮಸ್ಯೆಗಳು
- 4.1.8 ವಸತಿ ನಿಲಯದ ಸೌಲಭ್ಯಗಳು ಮತ್ತು ಸಮಸ್ಯೆಗಳು
- 4.1.9 ವಿದ್ಯಾರ್ಥಿವೇತನದ ಸೌಲಭ್ಯಗಳು ಮತ್ತು ಸಮಸ್ಯೆಗಳು

4.2 ವೈವಾಹಿಕ ಸಮಸ್ಯೆಗಳು

- 4.2.1 ವರದಕ್ಷಿಣೆಯ ಸಮಸ್ಯೆಗಳು

# ಅಧ್ಯಾಯ - 4

# ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟಜಾತಿ ವಿದ್ಯಾರ್ಥಿನಿಯರ ಆರ್ಥಿಕ ಮತ್ತು ವೈವಾಹಿಕ ಸಮಸ್ಯೆಗಳು

## 4.1 ಪೀಠಿಕೆ

ಪ್ರಸ್ತುತ ಅಧ್ಯಯನವು 2 ಭಾಗಗಳನ್ನು ಒಳಗೊಂಡಿದೆ. ಇದರಲ್ಲಿ ಮೊದಲನೆಯ ಭಾಗದಲ್ಲಿ ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರ ಅನುಭವಿಸುತ್ತಿರುವ ಕೆಲವು ಆರ್ಥಿಕ ಸಮಸ್ಯೆಯನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಎರಡನೆಯ ಭಾಗದಲ್ಲಿ ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರ ವೈವಾಹಿಕ ಅಭಿಲಾಸೆಯನ್ನು ತಿಳಿಯುವ ಪ್ರಯತ್ನ ಮಾಡಲಾಗಿದೆ. ಈಗ ಮೊದಲು ನಾವು ವಿದ್ಯಾರ್ಥಿಯ ಆರ್ಥಿಕ ಸಮಸ್ಯೆಯನ್ನು ತಿಳಿದುಕೊಳ್ಳುವ ಪುರಾತನ ಕಾಲದಿಂದಲೂ ಅಸ್ಪೃಶ್ಯ ಜಾತಿಗೆ ಸೇರಿದವರು ಮೇಲಿನ ವರ್ಗದ ಸೇವೆ ಮಾಡಿಕೊಂಡು ಅವರಕರುಣೆಯಲ್ಲಿಯೇ ಜೀವನ ನಡೆಸಬೇಕಾಗಿದಿತ್ತು. ಇವರಿಗೆ ಯಾವುದೇ ರೀತಿಯ ಹಕ್ಕು ಬಾಧ್ಯತೆಗಳಿಲ್ಲದೆ ಇವರು ಆರ್ಥಿಕ ಸಮಸ್ಯೆಯನ್ನು ಎದುರಿಸಬೇಕಾಯಿತು. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮಕ್ಕಳನ್ನು ಶಾಲೆಗೆ ಸೇರಿಸುವುದು ಕಷ್ಟಕರವಾಗಿದ್ದಿತು. ಸಾಮಾನ್ಯವಾಗಿ ಬಡತನದಿಂದ ಕೂಡಿದ ಕುಟುಂಬದಲ್ಲಿ ತಮ್ಮ ಮಕ್ಕಳನ್ನು ಮೇಲ್ವರ್ಗದವರ ಮನೆಯಲ್ಲಿ ಚೀತ್ಕರಿಸುತ್ತಿದ್ದರು. ಇಂತಹ ಕುಟುಂಬಗಳಿಂದ ಮಕ್ಕಳು ವಿದ್ಯಾಭ್ಯಾಸ ಮಾಡುವುದು ಕಷ್ಟ ಸಾಧ್ಯವಾಗಿತ್ತು. ಆದರೂ ಇವರು ಗಂಡು ಮಕ್ಕಳಿಗೆ ಮಾತ್ರ ಶಿಕ್ಷಣಕ್ಕೆ ಹೆಚ್ಚಿನ ಉತ್ತೇಜನ ನೀಡುತ್ತಿದ್ದರು. ಆದರೆ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡುತ್ತಿರಲಿಲ್ಲ. ಇವರಲ್ಲಿ ಬೇರೂರಿದ್ದ ಅಂತಹವೆಂದರೆ 'ಹೆಣ್ಣು ಮಕ್ಕಳು ಶಿಕ್ಷಣ ಪಡೆದು ಸಾಧಿಸುವುದಾದರೂ ಏನು'' ಎಂಬ ಮನೋಭಾವನೆಯನ್ನು ಬೆಳೆಸಿಕೊಂಡಿದ್ದರು. ಆರ್ಥಿಕವಾಗಿ ಸ್ತ್ರೀಯರು ಪುರುಷರನ್ನೇ ಅವಲಂಭಿಸಿದ್ದು ಆರ್ಥಿಕ ಸ್ವಾವಲಂಬನೆ ಇರುವುದಿಲ್ಲ. ಎಲ್ಲಾ ಜವಾಬ್ದಾರಿಯನ್ನು ಕುಟುಂಬದ ಹಿರಿಯ ವ್ಯಕ್ತಿಯೇ ನೋಡಿಕೊಳ್ಳಬೇಕಾಗಿದ್ದಿತು.

ಈ ಎಲ್ಲಾ ಸಮಸ್ಯೆಗಳಿಂದ ಮುಕ್ತವಾಗಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಸ್ತ್ರೀಯರು ಸಹ ಶಿಕ್ಷಣ ಪಡೆಯುವಂತಾದರು. ಇಲ್ಲಿ ವಿದ್ಯಾರ್ಥಿಗಳಿಗೆ ಎದುರಾಗುವ ಸಮಸ್ಯೆ, ಆರ್ಥಿಕ ಸಮಸ್ಯೆಯಾಗಿದೆ. ಪ್ರಮುಖವಾಗಿ ಹಣದ ಅವಶ್ಯಕತೆಯಿರುವುದರಿಂದ ಪ್ರತಿಯೊಂದು ಹಂತದಲ್ಲೂ ಸಹ ಇದು ನಿರಾಸೆಗೊಳಿಸುತ್ತದೆ. ಆರ್ಥಿಕವಾಗಿ ಉತ್ತಮವಾಗಿರುವವರ ಜೊತೆಯಿರುವಾಗ ಹಲವು ಮಾನಸಿಕ ಹಿಂಸೆಗಳಿಗೆ ಒಳಗಾಗಬೇಕಾಗುತ್ತದೆ.

ಶೋಷಣೆಯಿಂದ ಎಲ್ಲಾ ರೀತಿಯಲ್ಲೂ ಕೀಳಾಗಿ ಕಂಡಿರುವ ಈ ಜನ ಆರ್ಥಿಕವಾಗಿ ಬಹಳ ಹಿಂದುಳಿದಿದ್ದು ಶಿಕ್ಷಣ ಪಡೆಯುವಲ್ಲಿ ಸಮಸ್ಯೆಯನ್ನುಂಟು ಮಾಡಿದೆ. ಅವರನ್ನು ಶೈಕ್ಷಣಿಕವಾಗಿ ಅಭಿವೃದ್ಧಿಪಡಿಸಲು ಸರ್ಕಾರ ಹಲವು ರೀತಿಯಲ್ಲಿ ಧನ ಸಹಾಯ ನೀಡುತ್ತಿದೆ. ಇದು ಎಷ್ಟರಮಟ್ಟಿಗೆ ಅವರ ಕೈ ಸೇರುವುದೋ ಅದನ್ನು ಯಾವ ರೀತಿ ಬಳಸಿಕೊಳ್ಳುತ್ತಾರೋ ಎಂಬುದು ಪ್ರಶ್ನಾರ್ಥಕವಾಗಿದೆ.

ಸ್ತ್ರೀಯರ ಶಿಕ್ಷಣಕ್ಕೆ ಹಲವಾರು ಸಮಸ್ಯೆಗಳಿದ್ದರಿಂದ ಬ್ರಿಟಿಷ್ ಅಧಿಕಾರಿಗಳು ಹೆಣ್ಣು ಮಕ್ಕಳಿಗಾಗಿಯೇ ಪ್ರತ್ಯೇಕ ಶಾಲೆಗಳನ್ನು ತೆರೆಯಲು ಪ್ರಾರಂಭಿಸಿದರು. ಅಲ್ಲದೆ ಇವರಿಗೆ ಬೋಧನೆ ನೀಡಲುಮಹಿಳಾ ಶಿಕ್ಷಕಿಯರನ್ನೇ ನೇಮಕ ಮಾಡಲಾಗುತ್ತಿತ್ತು.[1]

ಸ್ವಾತಂತ್ರ್ಯಾ ನಂತರದಲ್ಲಿ ಗ್ರಾಮೀಣ ಶಿಕ್ಷಣಕ್ಕೆ ವಿಶೇಷ ಗಮನವನ್ನು ನೀಡಲಾಗಿದೆ. ಇದರಿಂದಾಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಸ್ತ್ರೀಯರ ಪ್ರಗತಿಯನ್ನು ಕಾಣಲಾಗಿದೆ. ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಿರುವುದರಿಂದ ತಮ್ಮ ಜೀವನವನ್ನು ತಾವೇ ರೂಪಿಸಿಕೊಳ್ಳುವಂತಹ ಅವಕಾಶ ಸಾಧ್ಯವಾಗಿದೆ.

ಮಜುಂದಾರ್‌ರವರು ಆರ್ಥಿಕತ ಒತ್ತಾಯ ಇಲ್ಲದಿರುವುದೇ ಈ ದೇಶದ ಮಹಿಳಾ ಶಿಕ್ಷಣದ ಬೆಳವಣಿಗೆಯ ಮಂದಗತಿಯಲ್ಲಿರಲು ಕಾರಣವಾಗಿದೆ. ಆದ್ದರಿಂದ ಸ್ತ್ರೀಯರು ಸಾಮಾಜಿಕ ವಿಷಯಗಳಲ್ಲಿ ಭಾಗವಹಿಸಲು ಆಸಕ್ತರಾಗಿರುವುದಿಲ್ಲ. ವಸಾಹತು ಆಡಳಿತದಲ್ಲಿಯೂ ಸಾಮಾನ್ಯವಾಗಿ ಮಹಿಳೆಯರ ಶಿಕ್ಷಣವನ್ನು ಸಹಕಾರಿ ಹಾಗೂ ಸೀಮಿತ ದೃಷ್ಟಿಕೋನದಿಂದ ನೋಡುತ್ತಾರೆ. ಸ್ವಾತಂತ್ರ್ಯೋತ್ತರದ ಕಾಲದಲ್ಲಿ ಶಿಕ್ಷಣಕ್ಕೆ ಹೊಸ ಆಯಾಮ ನೀಡಲಾಯಿತು.[2]

ಭಾರತ ಸಂವಿಧಾನವು ಸ್ತ್ರೀಯರಿಗೆ ಸಮಾನತೆಯನ್ನು ನೀಡುವುದರಿಂದ ಸ್ತ್ರೀಯರು ಬಹುಮುಖ್ಯವಾದಂತಹ ಪಾತ್ರವನ್ನು ವಹಿಸುತ್ತಾರೆ. ಆದ್ದರಿಂದ ಸ್ತ್ರೀಯರಿಗೆ ಪುರುಷ ಸಮಾನವಾದ ಶಿಕ್ಷಣವನ್ನು ನೀಡಬೇಕು. ಇದರಲ್ಲಿ ಸ್ತ್ರೀ ಪುರುಷರ ಶಿಕ್ಷಣದಲ್ಲಿ ಸಾಮಾನ್ಯ ಉದ್ದೇಶಗಳ ವ್ಯತ್ಯಾಸ ಕಂಡುಬರುವುದಿಲ್ಲ. ಇದರಿಂದಾಗಿ ಸ್ತ್ರೀಯರಿಗೆ ಪ್ರೌಢ ಮತ್ತು ವಿಶ್ವವಿದ್ಯಾಲಯದ ಹಂತದಲ್ಲಿ ಶಿಕ್ಷಣವನ್ನು ನೀಡಬೇಕು. ಜೊತೆಗೆ ವೃತ್ತಿಪರ ಹಾಗೂ ತಾಂತ್ರಿಕ ಶಿಕ್ಷಣವನ್ನು ನೀಡಬೇಕು. ಇದರಿಂದ ಸ್ತ್ರೀಯರು ಸಾಮಾಜಿಕ ಮತ್ತು ಆರ್ಥಿಕ ಜವಾಬ್ದಾರಿಯನ್ನು ಪುರುಷರಲ್ಲಿ ಹಂಚಿಕೊಳ್ಳಬಹುದು.

ಪುರುಷ ಸಹಭಾಗಿತ್ವ ಜೀವನ ನಡೆಸಲು ಸಾಧ್ಯವಾಗುತ್ತದೆ. ಅಲ್ಲದೆ ಸಮಾಜದಲ್ಲಿ ಸ್ತ್ರೀಯರ ಸ್ಥಾನಮಾನ, ಅಂತಸ್ತು ನಿರ್ಧರಿಸಿದಂತಾಗುತ್ತದೆ.

ಸ್ತ್ರೀಯರು ಸಮಾಜದಲ್ಲಿ ಉನ್ನತ ಸ್ಥಾನಮಾನವನ್ನು ಪಡೆಯಲು ಶಿಕ್ಷಣವು ಅತ್ಯಂತ ಪ್ರಮುಖವಾದುದು. ಸ್ತ್ರೀಯರ ಅಂತಸ್ತು ಮತ್ತು ಬೆಳವಣಿಗೆಗೆ ಶಿಕ್ಷಣದ ಅವಶ್ಯಕತೆಯಿದೆ. ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚಿನ ಅವಕಾಶಗಳನ್ನು ನೀಡುವುದರಿಂದ ಸಮಾಜದಲ್ಲಿ ಉತ್ತಮ ಸ್ಥಾನವನ್ನು ಪಡೆಯಬಹುದು. ಸ್ತ್ರೀಯರಿಗೆ ಶಿಕ್ಷಣವು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಉದ್ದೇಶಗಳಿಗಲ್ಲದೆ, ಸ್ತ್ರೀಯರು ಸಮಾಜದಲ್ಲಿ ನಿರ್ವಹಿಸುವಂತಹ ಪಾತ್ರಗಳಿಗೆ ಹಾಗೂ ಸ್ಥಾನಮಾನಗಳಿಗೆ ಶಿಕ್ಷಣದ ಅವ್ಶಯಕತೆಯಿದೆ.

### 4.1.1 ಕೌಟುಂಬಿಕ ಹಿನ್ನೆಲೆ

ಕುಟುಂಬವು ಸಮಾಜದ ಒಂದು ಮುಖ್ಯವಾದ ಘಟಕ. ಇದು ಸಾರ್ವತ್ರಿಕವಾದ, ಸರ್ವವ್ಯಾಪಕವಾದ, ಸಾಮಾಜಿಕ ಸಂಸ್ಥೆಯಾಗಿದೆ. ಪ್ರಪಂಚದ ಎಲ್ಲಾ ಸಮಾಜಗಳಲ್ಲಿಯೂ ಕುಟುಂಬವು ಅಸ್ತಿತ್ವದಲ್ಲಿರುವುದನ್ನು ಕಾಣಬಹುದು. ಮಾನವನ ಜೀವನದಲ್ಲಿ ಕುಟುಂಬವು ಮುಖ್ಯ ಪಾತ್ರವನ್ನು ವಹಿಸುತ್ತದೆ.

ಇಡೀ ಮಾನವನ ಸಾಮಾಜಿಕ ವ್ಯವಸ್ಥೆಗೆ ಕುಟುಂಬ ಒಂದು ಮೂಲಾಧಾರವಾದಂತ ಸಂಸ್ಥೆ. ಕುಟುಂಬವು ಜೀವನದ ಎಲ್ಲಾ ಚಟುವಟಿಕೆಗಳ ಕೇಂದ್ರ ಬಿಂದು ವ್ಯಕ್ತಿಯು ಜೀವನದ ಮೌಲ್ಯ. ಪ್ರೀತಿವಾತ್ಸಲ್ಯ ಇತ್ಯಾದಿಗಳನ್ನು ಕುಟುಂಬದಲ್ಲಿ ಪಡೆಯುತ್ತಾನೆ. ಇದರಿಂದ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುತ್ತದೆ. ಕುಟುಂಬವು ಶಿಶುವಿಗೆ ಸಂಸ್ಕಾರ ನೀಡುವುದು, ಶಿಕ್ಷಣವನ್ನು ಕೊಡುವುದು ಕರ್ತವ್ಯವಾಗಿದೆ.[3]

ಕುಟುಂಬಕ್ಕೂ, ಶಿಕ್ಷಣಕ್ಕೂ ಸಂಬಂಧವಿದೆ. ಚಿಕ್ಕ ಕುಟುಂಬದಲ್ಲಿ ಒಂದೋ, ಎರಡೋ ಮಕ್ಕಳಿರುವುದರಿಂದ ಸುಲಭವಾಗಿ ಶಿಕ್ಷಣವನ್ನು ಕೊಡಿಸಬಹುದು. ಕುಟುಂಬದ ಗಾತ್ರದಿಂದ ಸಾಮಾಜಿಕ, ಆರ್ಥಿಕ ಅಂತಸ್ತನ್ನು ನಿರ್ಣಯಿಸಬಹುದು. ಪೋಷಕರ ಆದಾಯವು ಶಿಕ್ಷಣಕ್ಕೆ ಪ್ರಮುಖವಾದ ಅಂಶವಾಗಿದೆ. ಹೆಚ್ಚಿನ ಆದಾಯ ಬರುವುದರಿಂದ ತಮ್ಮ ಮಕ್ಕಳನ್ನು ತಾಂತ್ರಿಕ, ವೈದ್ಯಕೀಯ ಹಾಗೂ ಇತರೆ ಉನ್ನತ ಶಿಕ್ಷಣವನ್ನು ಕೊಡಿಸಬಹುದು. ಇದಕ್ಕೆ ಹೆಚ್ಚಿನ ಹಣ

ವೆಚ್ಚವಾಗುತ್ತದೆ. ಹೆಚ್ಚಿನ ಆದಾಯ ಬರುವುದರಿಂದ ತಮ್ಮ ಮಕ್ಕಳನ್ನು ತಾಂತ್ರಿಕ, ವೈದ್ಯಕೀಯ ಹಾಗೂ ಇತರೆ ಉನ್ನತ ಶಿಕ್ಷಣವನ್ನು ಕೊಡಿಸಬಹುದು. ಇದಕ್ಕೆ ಹೆಚ್ಚಿನ ಹಣ ವೆಚ್ಚವಾಗುತ್ತದೆ. ಪರಿಣಾಮವಾಗಿ ಶೈಕ್ಷಣಿಕ ಒತ್ತಡ ಹೆಚ್ಚಿ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯುವುದು ಆದರೆ ದೊಡ್ಡ ಕುಟುಂಬಗಳಲ್ಲಿ ಪೋಷಕರ ಆದಾಯ ಹೆಚ್ಚಿದರೂ ತಮ್ಮ ಮಕ್ಕಳಿಗೆಲ್ಲಾ ಉನ್ನತ ಶಿಕ್ಷಣ ದೊರೆಯುವುದು ಕಡಿಮೆ. ಕುಟುಂಬದ ಮಕ್ಕಳೆಲ್ಲಾ ಶಿಕ್ಷಣ ಪಡೆಯಲು ಹೆಚ್ಚಿನ ಹಣದ ಅವಶ್ಯಕತೆಯಿದೆ. ಆದ್ದರಿಂದ ಮಕ್ಕಳ ಶಿಕ್ಷಣಕ್ಕೂ ಕುಟುಂಬಕ್ಕೂ ಸಂಬಂಧವಿದೆ ಎಂದು ಹೇಳಬಹುದು.

ಸಂದರ್ಶಿಸಿದ 60 ಪ್ರತಿವಾದಿಗಳ ಕುಟುಂಬದ ಗಾತ್ರವನ್ನು ಈ ಕೆಳಕಂಡ ಪಟ್ಟಿಯಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ- 4.1**

**ಕುಟುಂಬದ ಗಾತ್ರ**

| ಕ್ರಮ ಸಂಖ್ಯೆ | ಕುಟುಂಬದ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | 3 ರಿಂದ 5 | 42 | 70-00 | 42 |
| 2 | 6 ರಿಂದ 8 | 15 | 25-00 | 15 |
| 3 | 9ಕ್ಕಿಂತ ಹೆಚ್ಚು | 3 | 5.00 | 3 |
| | ಒಟ್ಟು | 60 | 100.00 | 60 |

ಈ ಮೇಲಿನ ಪಟ್ಟಿಯಲ್ಲಿ ಸಂದರ್ಶಿಸಿದ 60ಪ್ರತಿವಾದಿಗಳ ಕುಟುಂಬಗಳು ಈ ರೀತಿಯಲ್ಲಿವೆ. ಶೇಕಡ 70ರಷ್ಟು 3 ರಿಂದ 5 ಸದಸ್ಯರಿರುವ ಕುಟುಂಬಗಳಿಂದಲೂ ಶೇಕಡ 25 ರಷ್ಟು 6 ರಿಂದ 8 ಸದಸ್ಯರಿರುವ ಕುಟುಂಬಗಳಿಂದಲೂ, ಶೇಕಡ 5ರಷ್ಟು 9ಕ್ಕಿಂತ ಹೆಚ್ಚು ಸದಸ್ಯರಿರುವ ಕುಟುಂಬಗಳಿಂದ ಬಂದಿದ್ದಾರೆ. ಇದರಿಂದ ತಿಳಿದು ಬರುವುದೇನೆಂದರೆ ಹೆಚ್ಚಿನ ವಿದ್ಯಾರ್ಥಿನಿಯರು ಸಣ್ಣ ಕುಟುಂಬಗಳಿಂದ ಬಂದಿದವರಾಗಿರುತ್ತಾರೆ.

### 4.1.2 ತಂದೆಯ ವೃತ್ತಿ

ಯಾವುದೇ ಜಾತಿಯವರಾದರೂ ನಿರ್ದಿಷ್ಟಪಡಿಸಿದ ಸಂಪ್ರದಾಯಿಕ ವೃತ್ತಿಯನ್ನು ಪಾರಂಪರ್ಯವಾಗಿ ಅನುಸರಿಸಬೇಕಾಗಿದ್ದಿತು. ತಂದೆಯ ವೃತ್ತಿ, ಮಕ್ಕಳ ವಿದ್ಯಾಭ್ಯಾಸದ ಸಾಧನೆಗೆ ಪ್ರಮುಖವಾದುದು. ಇದರಿಂದ ಯಾವ ಕುಟುಂಬದಲ್ಲಿ ಪೋಷಕರು ಉತ್ತಮ ಅಂತಸ್ತು ಹಾಗೂ ಉದ್ಯೋಗ ಹೊಂದಿದ್ದಾರೆಯೋ ಅವರು ತಮ್ಮ ಮಕ್ಕಳು ಅದೇ ರೀತಿ ಉದ್ಯೋಗದಲ್ಲಿರುವಂತೆ ಬಯಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಬದಲಾವಣೆ ಕಂಡು ಬಂದಿದ್ದು, ಇದು ಪರಂಪರಾಗತ ವಿನ್ಯಾಸವಾಗಿದೆ. ಭಾರತದಲ್ಲಿ ಬಹುಸಂಖ್ಯಾತ ಗ್ರಾಮೀಣ-ನಗರ ವಾಸಿಗಳಲ್ಲಿ ಪರಂಪರಾಗತ ವೃತ್ತಿಗಳಲ್ಲಿ ಬದಲಾವಣೆಯಾಗಿ ಯಾಂತ್ರಿಕ ವೃತ್ತಿಗಳು ಕಂಡುಬರುತ್ತವೆ. ಇದರಿಂದ ಜಾತಿವಾರು ಬದಲಾವಣೆಯಾಗಿ ಕುಟುಂಬದಲ್ಲಿ ವೃತ್ತಿ ಜೀವನವು ಅವರ ಆರ್ಥಿಕ, ಅಂತಸ್ತನ್ನು ಸೂಚಿಸುತ್ತದೆ. ಇದರಿಂದ ಮಕ್ಕಳ ವಿದ್ಯಾಭ್ಯಾಸ ಮತ್ತು ಉದ್ಯೋಗಕ್ಕೆ ಹೆಚ್ಚಿನ ಅವಕಾಶ ದೊರೆಯುತ್ತದೆ.

**ಕೋಷ್ಟಕ - 4.2**

**ತಂದೆಯ ವೃತ್ತಿ**

| ಕ್ರಮ ಸಂಖ್ಯೆ | ಉದ್ಯೋಗಗಳ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | ವ್ಯವಸಾಯಗಾರರು | 25 | 41.66 | 35 |
| 2 | ವ್ಯಾಪಾರಸ್ಥರು | 10 | 16.66 | 10 |
| 3 | ಗುಮಾಸ್ತರು | 12 | 20.00 | 12 |
| 4 | ಗೆಜೆಟೆಡ್ ಅಧಿಕಾರಿಗಳು | 1 | 3.33 | 2 |
| 5 | ಇತರೆ | 11 | 18.33 | 11 |
| | ಒಟ್ಟು | 60 | 100.00 | 60 |

ಮೇಲಿನ ಪಟ್ಟಿಯಲ್ಲಿ ಪ್ರತಿವಾದಿಗಳ ಪೋಷಕರ ವೃತ್ತಿಯನ್ನು ಸೂಚಿಸಲಾಗಿದೆ. ಶೇಕಡ 41.66ರಷ್ಟು ಸದಸ್ಯರು ವ್ಯವಸಾಯವನ್ನು ಶೇಕಡ 16.66 ರಷ್ಟು ಸದಸ್ಯರು ವ್ಯಾಪರಸ್ಥರೂ ಆಗಿದ್ದಾರೆ. ಶೇಕಡ 20ರಷ್ಟು (ಕಾರಕೂನ) ಗುಮಾಸ್ತ ವೃತ್ತಿಯನ್ನು ಶೇಕಡ 3.33ರಷ್ಟು ಸದಸ್ಯರು ಗೆಜೆಟೆಡ್ ಅಧಿಕಾರಿಗಳು ಹಾಗೂ ಶೇಕಡ 18.33ರಷ್ಟು ಸದಸ್ಯರು ಇತರೆ ವೃತ್ತಿಯನ್ನು ಅವಲಂಭಿಸಿದ್ದಾರೆ. ಇದರಲ್ಲಿ ಕಂಡು ಬರುವ ಪ್ರಮುಖವಾದ ಅಂಶವೆಂದರೆ 25 ಸದಸ್ಯರು ವ್ಯವಸಾಯಗಾರರು. 10 ಸದಸ್ಯರು ಸ್ವಂತ ವ್ಯಾಪಾರವನ್ನು 25 ಸದಸ್ಯರು ಸರ್ಕಾರಿ ಹುದ್ದೆಗಳಲ್ಲಿರುವುದು ಕಂಡು ಬಂದಿದೆ.

### 4.1.3 ತಾಯಿಯವರ ವೃತ್ತಿ

ಸ್ತ್ರೀಯರ ಅಂತಸ್ತು, ಶಿಕ್ಷಣ ಹಾಗೂ ಉದ್ಯೋಗದ ಮೇಲೆ ನಿರ್ಧರಿಸಲಾಗುತ್ತದೆ. ತಾಯಿಯ ಉದ್ಯೋಗವು ಮಕ್ಕಳ ಶಿಕ್ಷಣಕ್ಕೆ ಮಾರ್ಗದರ್ಶನವಾಗುತ್ತದೆ. ಉದ್ಯೋಗಸ್ಥ ಸ್ತ್ರೀಯರು ತಮ್ಮ ಮಕ್ಕಳಿಗೆ ಉನ್ನತ ಶಿಕ್ಷಣ ಮತ್ತು ಉದ್ಯೋಗಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುತ್ತಾರೆ. ಪ್ರಾಚೀನ ಕಾಲದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಸ್ತ್ರೀಯರು ಶಿಕ್ಷಣ ಹಾಗೂ ಉದ್ಯೋಗ ಪಡೆಯುವಂತಿರಲಿಲ್ಲ. ಸಂಪ್ರದಾಯಿಕ ಉದ್ಯೋಗವನ್ನು ಅನುಸರಿಸಬೇಕಾಗಿದ್ದೀತು. ಆದರೆ ಇತ್ತೀಚಿನ ದಿನಗಳಲ್ಲಿ ಈ ವ್ಯವಸ್ಥೆ ಕಡಿಮೆಯಾಗಿದೆ.

ಸಂದರ್ಶಿಸಿದ ಪ್ರತಿವಾದಿಗಳ ತಾಯಿಯವರ ವೃತ್ತಿಯನ್ನು ಈ ಕೆಳಕಂಡ ಪಟ್ಟಿಯಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ - 4.3**

**ತಾಯಿಯ ವೃತ್ತಿ**

| ಕ್ರಮ ಸಂಖ್ಯೆ | ವೃತ್ತಿಯ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | ಗೃಹಿಣಿಯರು | 35 | 58.33 | 35 |
| 2 | ಅಧ್ಯಾಪಕಿಯರು | 14 | 23.33 | 14 |
| 3 | ಇತರೆ | 11 | 18.33 | 11 |
| | ಒಟ್ಟು | 60 | 100.00 | 60 |

ಮೇಲಿನ ಪಟ್ಟಿಯಲ್ಲಿ ಪ್ರತಿವಾದಿಗಳ ತಾಯಿಯವರ ವೃತ್ತಿಯನ್ನು ಸೂಚಿಸಲಾಗಿದೆ. ಶೇಕಡ 58.33ರಷ್ಟು ಗೃಹಿಣಿಯರು, ಶೇಕಡ 23.33ರಷ್ಟು ಅಧ್ಯಾಪಕಿಯರು, ಶೇಕಡ 18.33ರಷ್ಟು ಇತರೆ ವೃತ್ತಿಯಲ್ಲಿತೊಡಗಿದ್ದಾರೆ. ಹೆಚ್ಚಿನ ಸಂಖ್ಯೆಯಲ್ಲಿ ಯಾವುದೇ ವೃತ್ತಿಯಲ್ಲಿ ತೊಡಗದಿರುವಂತವರು ಕಂಡು ಬಂದಿದ್ದಾರೆ. ಆದರೂ ಸಹ ತಮ್ಮ ಮಕ್ಕಳು ವಿದ್ಯಾವಂತರಾಗಿರಬೇಕೆಂಬುದು ಇವರ ನಿಲುವಾಗಿದೆ.

### 4.1.4 ಸಹೋದರ-ಸಹೋದರಿಯರ ಶೈಕ್ಷಣಿಕ ಹಿನ್ನೆಲೆ

ಕುಟುಂಬದಲ್ಲಿ ವಿದ್ಯಾವಂತ ಪೋಷಕರಿರುವ ಹೆಚ್ಚಿನ ಆದಾಯವಿರುವ ಕುಟುಂಬಗಳಲ್ಲಿ ಹೆಚ್ಚಿನದಾಗಿ ಶಿಕ್ಷಣಕ್ಕೆ ಪ್ರೋತ್ಸಾಹ ದೊರೆಯುತ್ತದೆ. ವಿದ್ಯಾವಂತ ಸಹೋದರಿಯರಿಂದಲೇ ಮುಂದಿನ ಸಹೋದರ-ಸಹೋದರಿಯರ ಶಿಕ್ಷಣ ಪಡೆಯುವ ಮಾರ್ಗದರ್ಶನವಾಗುತ್ತದೆ. ಸಂದರ್ಶಿಸಿದ ಪ್ರತಿವಾದಿಗಳ ಸಹೋದರರ-ಸಹೋದರಿಯರ ಶೈಕ್ಷಣಿಕ ಹಿನ್ನೆಲೆಯನ್ನು ಕೆಳಕಂಡ ಪಟ್ಟಿಯಲ್ಲಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ - 4.4**

**ಸಹೋದರ-ಸಹೋದರಿಯರ ಶೈಕ್ಷಣಿಕ ಹಿನ್ನೆಲೆ**

| ಕ್ರಮ ಸಂಖ್ಯೆ | ಶೈಕ್ಷಣಿಕ ವರ್ಗೀಕರಣ | ಸಹೋದರರು ಪುನರಾವರ್ತನೆ | ಸಹೋದರರು ಶೇಕಡಾವಾರು | ಸಹೋದರಿಯರು ಪುನರಾವರ್ತನೆ | ಸಹೋದರಿಯರು ಒಟ್ಟು |
|---|---|---|---|---|---|
| 1 | ಪ್ರಾಥಮಿಕ | 10 | 10.75 | 10 | 13.8 |
| 2 | ಮಾಧ್ಯಮಿಕ | 10 | 10.75 | 15 | 20.8 |
| 3 | ಪ್ರೌಢ | 11 | 11.82 | 17 | 23.6 |
| 4 | ಪದವಿಪೂರ್ವ | 13 | 13.97 | 11 | 15.2 |
| 5 | ಪದವಿ | 16 | 17.20 | 10 | 13.1 |
| 6 | ತಾಂತ್ರಿಕ ಶಿಕ್ಷಣ | 15 | 16.12 | - | - |
| 7 | ಸ್ನಾತಕೋತ್ತರ | 18 | 19.35 | 9 | 12.4 |
| | ಒಟ್ಟು | 93 | 100.00 | 72 | 100.4 |

ಮೇಲಿನ ಪಟ್ಟಿಯಲ್ಲಿ ಪ್ರತಿವಾದಿಗಳ ಸಹೋದರ-ಸಹೋದರಿಯರ ಶೈಕ್ಷಣಿಕ ಮಟ್ಟವನ್ನು ಗುರ್ತಿಸಲಾಗಿದೆ. ಇವರಲ್ಲಿ ಪ್ರಾಥಮಿಕ ಶಿಕ್ಷಣವನ್ನು ಶೇಕಡ 10.75 ರಷ್ಟು, ಮಾಧ್ಯಮಿಕ ಶಿಕ್ಷಣವನ್ನು 10.75, 20.83 ರಷ್ಟು, ಪ್ರೌಢಶಿಕ್ಷಣವನ್ನು ಶೇಕಡ 11.82 ಹಾಗೂ 23.61 ರಷ್ಟು, ಪದವಿಪೂರ್ವ ಶಿಕ್ಷಣವನ್ನು 17.20, 13.88 ರಷ್ಟು, ತಾಂತ್ರಿಕ ಶಿಕ್ಷಣವನ್ನು ಶೇಕಡ 16.12 ರಷ್ಟು ಶೇಕಡ 19.35 ಹಾಗೂ ಶೇಕಡ 12.05 ರಷ್ಟು ಸ್ನಾತಕೋತ್ತರ ಶಿಕ್ಷಣವನ್ನು ಪಡೆದವರಾಗಿದ್ದಾರೆ. ಇದರಿಂದ ತಿಳಿದು ಬರುವ ಅಂಶವೆಂದರೆ ಪ್ರತಿವಾದಿಗಳ ಸಹೋದರ-ಸಹೋದರಿಯರು ವಿದ್ಯಾವಂತರಾಗಿದ್ದು, ಸಹೋದರರಲ್ಲಿ ಹೆಚ್ಚಿನದಾಗಿ ಸ್ನಾತಕೋತ್ತರ, ತಾಂತ್ರಿಕ ಮತ್ತು ಪದವಿ ಶಿಕ್ಷಣವನ್ನು ಪಡೆದುಕೊಂಡಿದ್ದಾರೆ. ಹಾಗೆಯೇ ಸಹೋದರಿಯರಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಪ್ರೌಢ ಶಿಕ್ಷಣವನ್ನು ಮತ್ತು ಸ್ನಾತಕೋತ್ತರ ಶಿಕ್ಷಣವನ್ನು ಪಡೆದುಕೊಂಡವರಾಗಿದ್ದಾರೆ.

### 4.1.5 ಪೋಷಕರ ಆಸ್ತಿಯ ವಿವರ

ಆಸ್ತಿಯು ಆದಾಯದ ಒಂದು ಮೂಲ, ವ್ಯಕ್ತಿಯ ಆರ್ಥಿಕ ಅಂತಸ್ತನ್ನು ಆಸ್ತಿಯು ಸೂಚಿಸುತ್ತದೆ. ಪೋಷಕರ ಆಸ್ತಿಯ ಮೂಲವು ಸದಸ್ಯರ ಜೀವನ ಶೈಲಿಯನ್ನು ರೂಪಿಸುತ್ತದೆ. ಮುಖ್ಯವಾದ ಕೆಲವು ಆಸ್ತಿಯ ಮೂಲವನ್ನು ಸಂದರ್ಶನದ ಮೂಲಕ ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

**ಕೋಷ್ಟಕ - 4.5**

**ತಂದೆಯ ಆಸ್ತಿಯ ಹಿನ್ನೆಲೆ**

| ಕ್ರಮ ಸಂಖ್ಯೆ | ಆಸ್ತಿಯ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | ಆಸ್ತಿ ಇಲ್ಲದವರು | 20 | 33.33 | 20 |
| 2 | 1 ರಿಂದ 4 | 12 | 20.00 | 12 |
| 3 | 5 ರಿಂದ 9 | 17 | 28.33 | 17 |
| 4 | 10 ರಿಂದ 14 | 5 | 8.33 | 5 |
| 5 | 15 ರಿಂದ 19 | 3 | 5.00 | 3 |
| 6 | 10 ರಿಂದ 24 | 3 | 5.00 | 3 |
| | ಒಟ್ಟು | 60 | 100.00 | 60 |

ಮೇಲಿನ ಪಟ್ಟಿಯಲ್ಲಿ ಮಾಹಿತಿದಾರರ ಪೋಷಕರ ಆಸ್ತಿಯ ಬಗ್ಗೆ ಸೂಚಿಸಲಾಗಿದೆ. ಶೇಕಡ 33.33ರಷ್ಟು ಆಸ್ತಿ ಇಲ್ಲದವರು, 1 ರಿಂದ 4 ಎಕರೆ ಜಮೀನನ್ನು ಹೊಂದಿರುವವರು ಶೇಕಡ 20ರಷ್ಟು ಶೇಕಡ 28.33ರಷ್ಟು 5 ರಿಂದ 9 ಎಕರೆ ಜಮೀನನ್ನು 10 ರಿಂದ 14ಎಕರೆಯನ್ನು ಜಮೀನನ್ನು ಶೇಕಡ 8.33ರಷ್ಟು ಸದಸ್ಯರು ಶೇಕಡ 5ರಷ್ಟು, 15 ರಿಂದ 19 ಎಕರೆ ಜಮೀನನ್ನು ಶೇಕಡ 5ರಷ್ಟು 20ಕ್ಕಿಂತ ಹೆಚ್ಚು ಜಮೀನನ್ನು ಹೊಂದಿದವರಾಗಿದ್ದಾರೆ. ಶೇಕಡ 80ರಷ್ಟು ಸದಸ್ಯರು ಆಸ್ತಿಯನ್ನು ಹೊಂದಿದರೆ, ಶೇಕಡ 20ರಷ್ಟು ಸದಸ್ಯರು ಆಸ್ತಿಯಿರುವುದಿಲ್ಲವಾದರೂ ಪರ್ಯಾಯವಾಗಿ ಬೇರೆ ಮೂಲವನ್ನು ಅವಲಂಭಿಸಿದವರಾಗಿದ್ದಾರೆ.

### 4.1.6 ಪೋಷಕರ ವರಮಾನದ ಹಿನ್ನೆಲೆ

ಸಮಾಜದಲ್ಲಿ ವರಮಾನದಿಂದಲೂ ಸಾಮಾಜಿಕ ಆರ್ಥಿಕ ಅಂತಸ್ತನ್ನು ನಿರ್ಧರಿಸಬಹುದು. ಪೋಷಕರ ವರಮಾನವನ್ನು ವಿಚಾರಣೆ ಮಾಡುವಾಗ ಹೆಚ್ಚಿನದಾಗಿ ಶಿಕ್ಷಣಕ್ಕೂ, ವರಮಾನಕ್ಕೂ ಸಂಬಂಧವಿದೆ. ಪೋಷಕರ ವರಮಾನದಿಂದ ಮಕ್ಕಳ ಶೈಕ್ಷಣಿಕ ವಾತಾವರಣ ನಿರ್ಮಾಣ ಮಾಡಬಹುದು. ಇದು ಮಕ್ಕಳ ಶಿಕ್ಷಣ ಮತ್ತು ಉದ್ಯೋಗವನ್ನು ಆಯ್ಕೆ ಮಾಡುವಲ್ಲಿ ನಿರ್ಣಾಯಕ ಘಾತ್ರ ವಹಿಸುತ್ತದೆ.

ವಿದ್ಯಾವಂತ ಪೋಷಕರು ತಮ್ಮ ಮಕ್ಕಳ ಉನ್ನತ ಶಿಕ್ಷಣ ಹಾಗೂ ಉದ್ಯೋಗಸ್ಥ ಹೆಚ್ಚಿನ ಪ್ರೋತ್ಸಾಹ ನೀಡುತ್ತಾರೆ. ಸಂದರ್ಶಿಸಿದ ಮಾಹಿತಿದಾರರ ಪೋಷಕರ ವರಮಾನವನ್ನು ಈ ಕೆಳಕಂಡಂತೆ ವಿಶ್ಲೇಷಿಸಲಾಗಿದೆ.

**ಕೋಷ್ಟಕ - 4.6**

ತಂದೆಯ ವರಮಾನದ ಹಿನ್ನೆಲೆ

| ಕ್ರ.ಸಂ. | ವರಮಾನದ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು | ಒಟ್ಟು |
|---|---|---|---|---|
| 1 | 1000-5000 | 10 | 16.66 | 10 |
| 2 | 6000-10000 | 18 | 30.00 | 18 |
| 3 | 11000-15000 | 10 | 16.66 | 10 |
| 4 | 16000-20000 | 12 | 20.00 | 12 |
| 5 | 20000 ಹೆಚ್ಚು | 10 | 16.66 | 10 |
| | ಒಟ್ಟು | 60 | 100.00 | 60 |

ಈ ಮೇಲಿನ ಪಟ್ಟಿಯಲ್ಲಿ ಸಂದರ್ಶಿತ ಮಾಹಿತಿದಾರರ ಪೋಷಕರ ವರಮಾನವನ್ನು ವಿವರಿಸಲಾಗಿದೆ. ಅದರಂತೆ ಶೇಕಡ 16.66ರಷ್ಟು ಸದಸ್ಯರು 1000-5000 ವರಮಾನವನ್ನು, 6000-10000ವರೆಗೆ ಶೇಕಡ 30ರಷ್ಟು ಸದಸ್ಯರು, ಶೇಕಡ 16.66ರಷ್ಟು ಸದಸ್ಯರು 11000-15000ವರಮಾನವನ್ನು, ಶೇಕಡ 20ರಷ್ಟು 16000-20000 ವರೆಗೆ ಶೇಕಡ 16.66ರಷ್ಟು ಸದಸ್ಯರು, 20000ಕ್ಕೂ ಹೆಚ್ಚು ವರಮಾನವನ್ನು ಪಡೆಯುವವರಿದ್ದಾರೆ. ಹೆಚ್ಚಿನದಾಗಿ 18 ಸದಸ್ಯರು 6000-10000 ವರಮಾನವನ್ನು ಹಾಗೂ 20000 ವರಮಾನವನ್ನು 12 ಸದಸ್ಯರು ಪಡೆಯುವವರಿದ್ದಾರೆ ಎಂದು ತಿಳಿದು ಬರುತ್ತದೆ.

### 4.1.7 ಆರ್ಥಿಕ ಸಮಸ್ಯೆಗಳು

ಈ ಪ್ರಸ್ತುತ ಅಧ್ಯಯನದಲ್ಲಿ ನೀವು ಪ್ರಾಥಮಿಕ ಶಿಕ್ಷಣದಿಂದ ಪ್ರಸ್ತುತ ಶಿಕ್ಷಣದ ವರೆಗೂ ಯಾವುದೇ ರೀತಿಯ ಸಮಸ್ಯೆಯನ್ನು ಎದುರಿಸಿದ್ದಾರೆ ಎಂದು ಕೇಳಿದ್ದೆವು. ಅದಕ್ಕೆ ವಿದ್ಯಾರ್ಥಿನಿಯರು ನೀಡಿದ ಉತ್ತರಗಳು ಕೋಷ್ಟಕ 4.7ರಲ್ಲಿ ನೋಡಬಹುದು.

**ಕೋಷ್ಟಕ - 4.7**

**ವಿದ್ಯಾರ್ಥಿನಿಯರು ಎದುರಿಸುತ್ತಿರುವ ಸಮಸ್ಯೆಗಳು**

| ಕ್ರ.ಸಂ. | ಸಮಸ್ಯೆಗಳು | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಆರ್ಥಿಕ ಸಮಸ್ಯೆ | 25 | 41.66 |
| 2 | ಸಾಮಾಜಿಕ ಸಮಸ್ಯೆ | 16 | 26.66 |
| 3 | ಶೈಕ್ಷಣಿಕ ಸಮಸ್ಯೆ | 10 | 16.66 |
| 4 | ಸಾರಿಗೆ ಸಮಸ್ಯೆ | 16 | 10.00 |
| 5 | ಇತರೆ ಸಮಸ್ಯೆ | 03 | 5.00 |
| | **ಒಟ್ಟು** | **60** | **100.00** |

ಈ ಮೇಲ್ಕಂಡ ಕೋಷ್ಟಕದಿಂದ ತಿಳಿದುಬಂದಿರುವುದೇನೆಂದರೆ ಸಂದರ್ಶಿಸಿದ ೬೦ ಪ್ರತಿವಾದಿಗಳಲ್ಲಿ ಬಹುಸಂಖ್ಯೆ ೪೧.೬೬ ವಿದ್ಯಾರ್ಥಿನಿಯರೇ ಅರ್ಥಿಕ ಸಮಸ್ಯೆಮ ಕಂಡುಬಂದಿದೆ.

ಪರಿಶಿಷ್ಟಜಾತಿಯ ಜನರ ಉಪರಂಪರೆಯಿಂದ ಬಡತನ-ನಿರುದ್ಯೋಗದಿಂದ ಕೂಡಿರುವಂತಹ ಕುಟುಂಬಗಳಾಗಿವೆ. ಅದರಿಂದಲೇ ಇವರಿಗೆ ಆರ್ಥಿಕ ಪರಿಸ್ಥಿತಿಯು ತುಂಬಾ ಹೆಚ್ಚಾಗಿ ಕಂಡು ಬಂದಿರುವುದೇ ಅಲ್ಲದೆ ಇವರ ತಂದೆ ತಾಯಿಯವರು ಕೃಷಿಯನ್ನು ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿರುವುದರಿಂದ ಯಾವುದೇ ವರಮಾನ ಇರುವುದಿಲ್ಲ. ಅದರಿಂದಲೇ ಇವರು ಆರ್ಥಿಕ ಸಮಸ್ಯೆಯಿಂದ ಕೂಡಿರುವ ಸ್ಥಿತಿಯನ್ನು ನೋಡಬಹುದಾಗಿದೆ. ಶೇಕಡ ೨೬.೬೬ರಷ್ಟು ವಿದ್ಯಾರ್ಥಿನಿಯರು ಸಾಮಾಜಿಕ ಸಮಸ್ಯೆಯನ್ನು ಎದುರಿಸಿದ್ದಾರೆ.

ಅಂದರೆಜಾತಿ-ಬೇಧ-ಲಿಂಗತಾರಮ್ಯತೆ ಲೈಂಗಿಕ ಕಿರುಕುಳ ಮುಂತಾದ ಸಮಸ್ಯೆಯನ್ನು ಎದುರಿಸುತ್ತಿರುವುದು ಕಂಡುಬಂದಿದೆ. ಅಲ್ಲದೆ ಕುಟುಂಬವನ್ನು ತಂದೆತಾಯಿಯರು ಹೆಣ್ಣು ಮಕ್ಕಳಿಗೆ ಕಾಲೇಜು ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸುವಂತಹದು ಕಂಡುಬಂದಿರುವ ಸಮಸ್ಯೆಯಾಗಿದೆ.

ಅಲ್ಲದೆ ಶೇ. ೧೬.೬೬ರಷ್ಟು ವಿದ್ಯಾರ್ಥಿಯರು ಶೈಕ್ಷಣಿಕ ಸಮಸ್ಯೆಯನ್ನು ಹೇಳಿಕೊಂಡಿದ್ದಾರೆ. ಇದರಲ್ಲಿ ಹೆಚ್ಚಾಗಿ ಭಾಷೆ ಸಮಸ್ಯೆ ಕಂಡುಬಂದಿದೆ. ಗ್ರಾಮಾಂತರ ಪ್ರದೇಶಗಳಿಂದ ಬಂದಂತಹ ಹೆಚ್ಚಿನದಾಗಿ ಕನ್ನಡ ಮಾಧ್ಯಮದಲ್ಲಿಯೇ ಅಧ್ಯಯನ ಮಾಡಿದ್ದು ಉನ್ನತ ಶಿಕ್ಷಣಕ್ಕೆ ಬಂದ ಮೇಲೆ ಇಂಗ್ಲೀಷ್ ಮುಖ್ಯವಾಗಿರುತ್ತದೆ. ಗ್ರಾಮಾಂತರ ಪ್ರದೇಶಗಳಿಂದ ಬಂದಂತಹವರಿಗೆ ಪ್ರಾಥಮಿಕ ಹಂತದಲ್ಲಿ ಗ್ರಾಂಥಿಕ ಬಾಷೆಗೆ ಹೊಂದಿಕೊಳ್ಳುವುದು ಕಷ್ಟವಾಗುತ್ತದೆ. ಉನ್ನತ ಶಿಕ್ಷಣದಲ್ಲಿ ಇಂಗ್ಲೀಷ್ ಭಾಷೆಯು ಪ್ರಮುಖ ಸ್ಥಾನವನ್ನು ವಹಿಸಿದ್ದು ಭಾಷ ಸಮಸ್ಯೆಯು ಕಂಡುಬಂದಿದೆ ಎಂದಿದ್ದಾರೆ.

ಅಲ್ಲದೆ ವಿದ್ಯಾರ್ಥಿನಿಯರಿಗೆ ಗ್ರಂಥಾಲಯದ ಸಮಸ್ಯೆ ಕಂಡುಬಂದಿದೆ. ಶೈಕ್ಷಣಿಕ ಸಮಸ್ಯೆಯಲ್ಲಿ ವಿದ್ಯಾರ್ಥಿಗಳ ಗ್ರಂಥಾಲಯವು ಅತ್ಯಂತ ಪ್ರಮುಖವಾದುದು . ಬಹಳಷ್ಟು ವಿದ್ಯಾರ್ಥಿನಿಯರಿಗೆ ಗ್ರಂಥಾಲಯದ ಸಮಸ್ಯೆ ಕಂಡು ಬಂದಿದ್ದು ಬಡತನದಿಂದ ಬಂದಂತಹವರು ಆರ್ಥಿಕವಾಗಿ ತಮಗೆ ಅಗತ್ಯವಾದ ಪುಸ್ತಕಗಳನ್ನು ಕೊಂಡುಕೊಳ್ಳಲು ಸಾಧ್ಯವಾಗುವುದಿಲ್ಲ. ಅಂತಹ ಸಮಯದಲ್ಲಿ ಗ್ರಂಥಾಲಯ ಜೀವನಾಡಿಯಾಗಿವೆ. ಹಾಗಾಗಿ ಗ್ರಂಥಾಲಯವನ್ನೇ ಬಳಸಿಕೊಳ್ಳುವುದು ಸೂಕ್ತವಾಗಿದ್ದು ಕನ್ನಡ ಮಾಧ್ಯಮಗಳಿಂದ ಬಂದಿರುವಂತಹ ವಿದ್ಯಾರ್ಥಿನಿಯರಿಗೆ ಬೇಕಾದ ಕನ್ನಡ ಮಾಧ್ಯಮದ ಪುಸ್ತಕಗಳು ಇಲ್ಲದಿರುವುದು ಅಗತ್ಯವಾಗಿರುವ ಪುಸ್ತಕಗಳಲ್ಲಿ ಪುಟಗಳಿಲ್ಲದಿರುವುದು ಕೊಂಡುಕೊಳ್ಳಲು ಸಾಧ್ಯವಾಗದಂತಹ ಅಧಿಕ ಹಿನ್ನೆಲೆಯಿರುವ ಪುಸ್ತಕಗಳು ಸಿಗುವುದೇ ಇಲ್ಲ ಎಂದಿದ್ದಾರೆ.

ಪ್ರಸ್ತುತ ಅಧ್ಯಯನದಲ್ಲಿ ಆರ್ಥಿಕ ಸಮಸ್ಯೆಯು ಒಸ್ಸೆಲೆಯನ್ನು ತಿಳಿಯುವುದು ಸೂಕ್ತವಾದದ್ದು.

ನಾವು ಮತ್ತೇ ಇವು ಪ್ರಸ್ತುತ ಕೋರ್ಸ್‌ಗೆ ಸೇರುವಾಗ ಯಾವುದೇ ರೀತಿಯ ಸಮಸ್ಯೆಯನ್ನು ಅನುಮಾನಿಸಿದ್ದಾರೆ ಎಂದು ಕೇಳಿದ್ದವು. ಅದಕ್ಕೆ ಹೆಚ್ಚಿನ ವಿದ್ಯಾರ್ಥಿಯು ಹಣಕಾಸಿನ ಸಮಸ್ಯೆಯನ್ನು ಎದುರಿಸಿದ್ದೇವೆ ಎಂದು ಉತ್ತರವನ್ನು ನೀಡಿದ್ದಾರೆ.

ನಾವು ಈ ಸಮಸ್ಯೆಯಿಂದ ಯಾವ ರೀತಿಯಲ್ಲಿ ಹೊರಬಂದಿರಾ ಎಂದು ಕೇಳಿದ ಪ್ರಶ್ನೆಗೆ ಕೋಷ್ಠಕ 4.3ರಲ್ಲಿ ಈ ಕೆಳಕಂಡ ಉತ್ತರಗಳನ್ನು ನಾವು ನೋಡಬಹುದು.

**ಕೋಷ್ಠಕ 4.8**

**ಸಮಸ್ಯೆಯಿಂದ ಹೊರಬಂದ ರೀತಿ**

| ಕ್ರ.ಸಂ. | ಸಹಾಯ ಮಾಡಿದವರು | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ತಂದೆ-ತಾಯಿಯರ ಸಹಾಯ | 12 | 48.00 |
| 2 | ಅಣ್ಣ-ಅಕ್ಕಂದಿರ ಸಹಾಯ | 6 | 24,00 |
| 3 | ಸಂಬಂಧಿಕರು | 4 | 16.00 |
| 4 | ಸ್ನೇಹಿತರು | 1 | 4.00 |
| 5 | ಸ್ವತಃ ತಾನೇ | 2 | 8.00 |
| | **ಒಟ್ಟು** | **25** | **100.00** |

ಈ ಮೇಲ್ಕಂಡ ಕೋಷ್ಟಕದಿಂದ ತಿಳಿಯುವುದೇನೆಂದರೆ ಸಂದರ್ಶಿಸಿದ 25 ಪ್ರತಿವಾದಿಗಳಲ್ಲಿ ಶೇ. 48.00 ರಷ್ಟು ವಿದ್ಯಾರ್ಥಿಗಳು ಆರ್ಥಿಕ ಸಮಸ್ಯೆಯನ್ನು ತಮ್ಮ ತಂದೆ ತಾಯಿಯಿಂದ ಬಗೆಹರಿಸಿಕೊಂಡಿದ್ದಾರೆ. ಅಂದರೆ ತಂದೆ-ತಾಯಿಗಳು ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಸಹಕಾರವನ್ನು ನೀಡುತ್ತಿದ್ದಾರೆ.

ಶೇ. 24.00ರಷ್ಟು ಜನರು ಆರ್ಥಿಕ ಸಮಸ್ಯೆಯನ್ನು ತಮ್ಮ ಸಹೋದರರು ಮತ್ತು ಸಹೋದರಿಯಿಂದ ಈಡೇರಿಸಿಕೊಳ್ಳುತ್ತಾರೆ. ಅಲ್ಲದೆ ಶೇ 16.00ರಷ್ಟು ಜನರು ತಮ್ಮ ಸಂಬಂಧಿಕರು ಮತ್ತು ಶೇ. 4.00ರಷ್ಟು ಜನರು ತಮ್ಮ ಸ್ನೇಹಿತರಿಂದ ಈಡೇರಿಸಿಕೊಳ್ಳುತ್ತಾರೆ. ಇಲ್ಲಿ ಗಮನಿಸುವುದೇನೆಂದರೆ ಶೇ. 8.00 ರಷ್ಟು ವಿದ್ಯಾರ್ಥಿಯರು ಸ್ವತಃ ತಾನೇ ಅಂದರೆ ಅರೆಕಾಲಿಕ ಕೆಲಸ ಮಾಡಿ ಇದನ್ನು ಈಡೇರಿಸಿಕೊಳ್ಳುತ್ತೇವೆ ಎಂದಿದ್ದಾರೆ. ಹೀಗೆ ಆರ್ಥಿಕ ಸಮಸ್ಯೆಯಿಂದ ಇವರು ಹೊರಬರಲು ಪ್ರಯತ್ನಿಸಿದ್ದಾರೆ.

### 4.1.8 ವಸತಿನಿಲಯದ ಸೌಲಭ್ಯ ಮತ್ತು ಸಮಸ್ಯೆಗಳು

ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಸಾಮಾನ್ಯವಾಗಿ ಗ್ರಾಮೀಣ ಪ್ರದೇಶದಿಂದ ಬಂದಿರುವುದರಿಂದ ಇವರ ಉನ್ನತ ಶಿಕ್ಷಣದ ಅನುಕೂಲಕ್ಕಾಗಿ ಸರ್ಕಾರ ವಸತಿನಿಲಯಗಳನ್ನು ಆರಂಭಿಸಿ ಅವರಿಗೆ ಉಚಿತ ಊಟ ಮತ್ತು ವಸತಿವ್ಯವಸ್ಥೆಗಳನ್ನು ಕಲ್ಪಿಸಿದೆ. ನಂತರ ಅದೇ ತರವಾದ ಕೆಲವು ವಸತಿ ನಿಲಯಗಳಲ್ಲಿ ಪರಿಶಿಷ್ಟ ಜಾತಿ ವಿದ್ಯಾರ್ಥಿನಿಯರಿಗೆ ಉನ್ನತ ವರ್ಗದ ವಿದ್ಯಾರ್ಥಿನಿಯರಿಂದ ಜಾತೀಯತೆ ಸಮಸ್ಯೆಗಳು ಇನ್ನೂ ಮುಂತಾದ ಸಮಸ್ಯೆಗಳು ಕಂಡುಬಂದಿವೆ. ಜೊತೆಗೆ ವಸತಿ ನಿಲಯಕ್ಕೆ ಪ್ರವೇಶ ವಿನಾಯಿತಿ ಇದ್ದು ಹಣವನ್ನು ಸಹ ವಸೂಲಿ ಮಾಡುತ್ತಾರೆ. ಈ ಕೆಳಗೆ ವಸತಿನಿಲಯದ ಸೌಲಭ್ಯ ಮತ್ತು ಸ ಮಸ್ಯೆಗಳನ್ನು ಕೆಳಗಿನ ಕೋಷ್ಟಕಗಳ ಮುಖಾಂತರ ತಿಳಿಯಬಹುದಾಗಿದೆ.

**ಕೋಷ್ಟಕ 4.9**

| ಕ್ರ.ಸಂ. | ಸಮಸ್ಯೆಗಳು | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ವಿದ್ಯಾಭ್ಯಾಸಕ್ಕಾಗಿ | 11 | 61.11 |
| 2 | ಊರು ದೂರ ಇರುವುದು | 3 | 16.66 |
| 3 | ಸಂಬಂಧಿಕರು ಇಲ್ಲ | 4 | 22.22 |
| | **ಒಟ್ಟು** | **18** | **100.00** |

ಪ್ರಸ್ತುತ ಸಂಶೋಧನ ಅಧ್ಯಯನದ ಒಟ್ಟು ವಿದ್ಯಾರ್ಥಿನಿಯರಲ್ಲಿ ಪ್ರತಿಶತ 61.11 ವಿದ್ಯಾರ್ಥಿನಿಯರು ಮಾತ್ರ ತಾವು ಅಧ್ಯಯನಮಾಡುತ್ತಿರುವ ಮಹಾವಿದ್ಯಾಲಯದಲ್ಲಿ ವಸತಿ ನಿಲಯಕ್ಕೆ ಸೇರಿರುವುದು ವಿದ್ಯಾಭ್ಯಾಸದ ಕಾರಣದಿಂದ ಶೇ. 61.11ರಷ್ಟು ಊರು ದೂರ ಇರುವ ಕಾರಣದಿಂದ ಶೇ. 22.22 ರಷ್ಟು ಇಲ್ಲಿ ಯಾವುದೇ ಸಂಬಂಧಿಕರು ಇರುವುದಿಲ್ಲ. ಈ ಕಾರಣದಿಂದ ಇವರು ವಸತಿ ನಿಲಯದಲ್ಲಿರುವುದು ಕಂಡುಬರುತ್ತದೆ. ಇದರಿಂದ ತಿಳಿಯುವುದೇನೆಂದರೆ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರು ಗ್ರಾಮೀಣ ಪ್ರದೇಶದಲ್ಲಿರುವುದರಿಂದ ಇವರಿಗೆ ಯಾವುದೇ ಆರ್ಥಿಕ ಸೌಲಭ್ಯವಿರುವುದಿಲ್ಲ. ಅದರಿಂದಲೇ ಇವರು ವಸತಿನಿಲಯದಲ್ಲಿರುವುದು ತಿಳಿದುಬಂದಿದೆ. ದೂರದ ಗ್ರಾಮೀಣ ಪ್ರದೇಶದ ವಿದ್ಯಾರ್ಥಿನಿಯರಿಗೆ ದಿನಂಪ್ರತಿ ಕಾಲೇಜಿಗೆ ಬಂದು ಹೋಗುವುದು ತುಂಬಾಕಷ್ಟಕರವಾದದ್ದಾಗಿದೆ. ಈಗಾಗಲೇ ಇರುವಂತಹ ವಸತಿನಿಲಯಗಳು ವೈದ್ಯಕೀಯ, ಇಂಜನಿಯರಿಂಗ್, ಎಂ.ಬಿ.ಎಸ್.ಡಬ್ಲ್ಯು ಹಾಗೂ ಬಿ.ಇಡಿ. ಶಿಕ್ಷಣ ಸಂಸ್ಥೆಗೆ ಸಂಬಂಧಪಟ್ಟ ವಸತಿ ನಿಲಯಗಳಾಗಿರುತ್ತೇವೆ. ಆದರೆ ಕಲಾ, ವಿಜ್ಞಾನ, ವಾಣಿಜ್ಯ ಹಾಗೂ ಕಾನೂನು ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾರ್ಥಿನಿಯರ ವಸತಿನಿಲಯದ ಸೌಲಭ್ಯ ಇದೆ ಅಂಶವು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಕಂಡು ಬಂದಿರುತ್ತದೆ.

**ಕೋಷ್ಟಕ - 4.10**

**ವಸತಿ ನಿಲಯದಲ್ಲಿ ಪ್ರವೇಶ ಪಡೆದ ಕ್ರಮಗಳು**

| ಕ್ರ.ಸಂ. | ಪ್ರವೇಶ ಪದ್ಧತಿ | ಒಟ್ಟು | ಪ್ರತಿಶತ |
|---|---|---|---|
| 1 | ಜಾತಿ ಆಧಾರದ ಮೇಲೆ | 15 | 83.33 |
| 2 | ಮೆರಿಟ್ ಆಧಾರದ ಮೇಲೆ | 2 | 11.11 |
| 3 | ಜಾತಿ ಮತ್ತು ಅಂಕಗಳ ಆಧಾರದ ಮೇಲೆ | 1 | 5.55 |
| 4 | ವಂತಿಗೆ ಆಧಾರದ ಮೇಲೆ | ಇಲ್ಲ | - |
| | **ಒಟ್ಟು** | **18** | **100.00** |

ಕೋಷ್ಟಕ 4.10ರ ಮುಖಾಂತರ ತಿಳಿದು ಬರುವುದೇನೆಂದರೆ ಪ್ರಸ್ತುತ ಸಂಶೋಧನ ಅಧ್ಯಯ ಒಟ್ಟು ವಿದ್ಯಾರ್ಥಿನಿಯರಲ್ಲಿ ಪ್ರತಿಶತ 83.33ರಷ್ಟು ವಿದ್ಯಾರ್ಥಿನಿಯರು ವಸತಿನಿಲಯದ ಪ್ರವೇಶ ಪದ್ಧತಿಯು ಜಾತಿಯ ಮೆರಿಟ್ ಆಧಾರದ ಮೇಲೆ 11.11 ಮತ್ತು ಜಾತಿ ಮತ್ತು ಅಂಕಗಳ ಆಧಾರದ ಮೇಲೆ ಇದೆ ಎಂದು ಹೇಳಿದ್ದರೆ ಅತಿ ಹೆಚ್ಚಿನ ಸಂಖ್ಯೆಯ ಅಂದರೆ ಪ್ರತಿಶತ 5.55ರಷ್ಟು ವಿದ್ಯಾರ್ಥಿನಿಯರು ವಸತಿ ನಿಲಯದ ಪ್ರವೇಶ ಪದ್ಧತಿಯು ವಂತಿಗೆ ಆಧಾರದ ಮೇಲೆ ಇದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈ ಮೇಲಿನ ಅಂಕಿ - ಅಂಶಗಳ ವಿವರಣೆಯಿಂದ ತಿಳಿದು ಬರುವ ಪ್ರಮುಖ ಸಂಗತಿ ಏನೆಂದರೆ ಕೆಲವು ಜನ ವಿದ್ಯಾರ್ಥಿನಿಯರು ವಸತಿನಿಲಯದ ಪ್ರವೇಶ ಪದ್ಧತಿಯು ಜಾತಿ ಮತ್ತು ಅಂಕಗಳ ಆಧಾರದ ಮಲೇ ಇದೆ ಹೇಳಿದ್ದಾರೆ. ಆದರೆ ಅಧಿಕ ಸಂಖ್ಯೆಯ ವಿದ್ಯಾರ್ಥಿನಿಯರು ವಸತಿ ನಿಲಯದ ಪ್ರವೇಶ ಪದ್ಧತಿಯ ವಂತಿಗೆ ಆಧಾರದ ಮೇಲೆ ಇದೆ ಎಂದು ಹೇಳಿದ್ದಾರೆ. ಇಲ್ಲಿ ಗಮನಿಸಬೇಕಾದ ಪ್ರಮುಖವಾದ ಅಂಶವೇನೆಂದರೆ ವಸತಿ ನಿಲಯಗಳಲ್ಲಿರುವ ವಂತಿಗೆ ಆಧಾರದ ಮೇಲಿನ ಪ್ರವೇಶ ಪದ್ಧತಿಯು ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಿಗೆ ಇದು ಆರ್ಥಿಕ ಹೊರೆಯಾಗಿದೆ ಎಂದು ಹೇಳಿದರೆ ತಪ್ಪಾಗಲಾರದು.

**ಕೋಷ್ಟಕ-4.11**

ವಿದ್ಯಾರ್ಥಿನಿಯರು ವಾಸವಾಗಿರುವ ವಸತಿನಿಲಯಗಳಲ್ಲಿನ

ಪ್ರವೇಶ ಪದ್ಧತಿಯ ವರ್ಗೀಕರಣ

| ಕ್ರ.ಸಂ. | ಪ್ರವೇಶ ಪದ್ಧತಿ | ಒಟ್ಟು | ಶೇಕಡಾವಾರು |
|---|---|---|---|
| 1 | ಉಚಿತವಾಗಿದೆ | 15 | 83.33 |
| 2 | ಶುಲ್ಕ ವಿನಾಯಿತಿ ಇದೆ | 2 | 11.11 |
| 3 | ಉಚಿತವಾಗಿಲ್ಲ | 1 | 11.11 |
| | **ಒಟ್ಟು** | **18** | **100.00** |

ಕೋಷ್ಟಕ 4.11 ಸೂಚಿಸುವಂತೆ ಪ್ರಸ್ತುತ ಸಂಶೋಧನ ಅಧ್ಯಯನ ಒಟ್ಟು ವಿದ್ಯಾರ್ಥಿನಿಯರಲ್ಲಿ ಪ್ರತಿಶತ 83.33 ರಷ್ಟು ಜನ ವಿದ್ಯಾರ್ಥಿನಿಯರು ವಸತಿ ನಿಲಯದ ಪ್ರವೇಶ ಪದ್ಧತಿಯಲ್ಲಿ ಶುಲ್ಕ ವಿನಾಯಿತಿ ಇದೆ ಎಂದು ಹೇಳಿದ್ದಾರೆ. ಅತಿ ಹೆಚ್ಚಿನ ಸಂಖ್ಯೆಯು ಅಂದರೆ ಪ್ರತಿಶತ 11.11 ರಷ್ಟು ವಿದ್ಯಾರ್ಥಿನಿಯರು ವಸತಿನಿಲಯದ ಪ್ರವೇಶಪದ್ಧತಿಯು ಉಚಿತವಾಗಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಮೇಲಿನ ಅಂಕಿ-ಅಂಶಗಳ ವಿವರಣೆಯಿಂದ ತಿಳಿದು ಬರುವುದೇನೆಂದರೆ ಅತಿಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿನಿಯರು ತಾವು ವಾಸವಾಗಿರುವ ವಸತಿನಿಲಯದಲ್ಲಿನ ಪ್ರವೇಶ ಪದ್ಧತಿಯು ಉಚಿತವಾಗಿಲ್ಲವೆಂದು ಹೇಳಿರುವುದು ಸ್ಪಷ್ಟವಾಗುತ್ತದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಪ್ರಮುಖವಾದ ಅಂಶವೇನೆಂದರೆ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಿಗೂ ಕೂಡಾ ಇತರೆ ಜಾತಿಯ ವಿದ್ಯಾರ್ಥಿನಿಯರಂತೆ ವಸತಿನಿಲಯದಲ್ಲಿ ಪ್ರವೇಶ ಪಡೆದುಕೊಳ್ಳುವಾಗ ಒಂದೇ ತೆರನಾದ ಪ್ರವೇಶ ಶುಲ್ಕವನ್ನು ಹಾಗೂ ಇತರೆ ಶುಲ್ಕಗಳನ್ನು ತೆಗೆದುಕೊಳ್ಳುತ್ತಾರೆ ಎನ್ನುವ ಅಂಶವು ಕ್ಷೇತ್ರಕಾರ್ಯ ಮಾಡುವ ಸಂದರ್ಭದಲ್ಲಿ ಕಂಡು ಬರುತ್ತದೆ.

**ಕೋಷ್ಟಕ-4.12**

**ವಸತಿನಿಲಯವು ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಅಧ್ಯಯನಕ್ಕೆ ಪೂರಕವಾದ ಸೌಲಭ್ಯಗಳನ್ನು ಹೊಂದಿದೆಯೇ ? ಎಂಬುದರ ಬಗ್ಗೆ ವರ್ಗೀಕರಣ**

| ಕ್ರ.ಸಂ. | ಅಭಿಪ್ರಾಯಗಳು | ಒಟ್ಟು | ಪ್ರತಿಶತ |
|---|---|---|---|
| 1 | ಹೊಂದಿರುತ್ತದೆ | 5 | 27.77 |
| 2 | ಹೊಂದಿರುವುದಿಲ್ಲ | 13 | 72.22 |
| | ಒಟ್ಟು | **18** | **100.00** |

ಕೋಷ್ಟಕ 4.12ರಲ್ಲಿ ಕಂಡುಬಂದಿರುವಂತೆ ಪ್ರಸ್ತುತ ಸಂಶೋಧನಾ ಅಧ್ಯಯನ ಒಟ್ಟು ವಿದ್ಯಾರ್ಥಿನಿಯರಲ್ಲಿ ಪ್ರತಿಶತ 27.77ರಷ್ಟು ವಿದ್ಯಾರ್ಥಿನಿಯರು ಅಧ್ಯಯನಕ್ಕೆ ಪೂರಕವಾದ ಸೌಲಭ್ಯ ಹೊಂದಿರುವುದಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಇದರಿಂದ ತಿಳಿದುಬರುವುದೇನೆಂದರೆ ಬಹುಸಂಖ್ಯಾತ ವಿದ್ಯಾರ್ಥಿನಿಯರು ವಸತಿನಿಲಯಗಳು ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರ ಅಧ್ಯಯನಕ್ಕೆ ಪೂರಕವಾದ ಸೌಲಭ್ಯವನ್ನು ಹೊಂದಿರುವುದಿಲ್ಲವೆಂದು ಹೇಳಿರುವುದು ತಿಳಿಯುತ್ತದೆ.

### 4.1.9 ವಿದ್ಯಾರ್ಥಿವೇತನ ಸೌಲಭ್ಯ

ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರು ಗ್ರಾಮೀಣ ಪ್ರದೇಶದಿಂದ ಬಂದಿದ್ದು ಇವರ ವಿದ್ಯಾಭ್ಯಾಸದ ಅನುಕೂಲಕ್ಕಾಗಿ ವಸತಿನಿಲಯವನ್ನು ಆರಂಭಿಸಿ ಜೊತೆಗೆ ಅವರ ವಿದ್ಯಾಭ್ಯಾಸದ ವೆಚ್ಚಗಳನ್ನು ಭರಿಸುವುದಕ್ಕಾಗಿ ಸರ್ಕಾರವು ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನದ ಸೌಲಭ್ಯವನ್ನೂ ಸಹ ನೀಡಲಾಗಿದೆ. ಆದರೆ ಅದನ್ನು ಸರಿಯಾದ ಸಮಯಕ್ಕೆ ನೀಡುವುದಿಲ್ಲ ಮತ್ತು ಅದರಿಂದ ಶೈಕ್ಷಣಿಕ ಸಮಸ್ಯೆಗಳನ್ನು ಈಡೇರಿಸಿಕೊಳ್ಳಲುಸಾಧ್ಯವಾಗುತ್ತಿಲ್ಲ. ವಿಶ್ವವಿದ್ಯಾಲಯದ ಸಿಬ್ಬಂದಿಯವರು ಮಾಮೂಲಿಯನ್ನು ಸಹ ಕೇಳುತ್ತಾರೆಂದು ವಿದ್ಯಾರ್ಥಿನಿಯರು ತಿಳಿಸಿದ್ದಾರೆ. ಆದ್ದರಿಂದ ವಿದ್ಯಾರ್ಥಿವೇತನದ ಸೌಲಭ್ಯ ಮತ್ತು ಸಮಸ್ಯೆಗಳನ್ನು ಕೆಳಗಿನ ಕೋಷ್ಟಕಗಳಲ್ಲಿ ತಿಳಿಸಲಾಗಿದೆ.

**ಕೋಷ್ಟಕ-4.13**

**ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳುತ್ತಾರೆಯೇ ? ಎಂಬುದರ ಬಗ್ಗೆ ಅಭಿಪ್ರಾಯಗಳ ವರ್ಗೀಕರಣ**

| ಕ್ರ.ಸಂ. | ಅಭಿಪ್ರಾಯಗಳು | ಒಟ್ಟು | ಪ್ರತಿಶತ |
|---|---|---|---|
| 1 | ಹೌದು | 48 | 80.00 |
| 2 | ಇಲ್ಲ | 12 | 20.00 |
| | ಒಟ್ಟು | 60 | 100.00 |

ಈ ಕೋಷ್ಟಕದ ಮೂಲಕ ತಿಳಿದು ಬರುವುದೇನೆಂದರೆ ಪ್ರಸ್ತುತ ಸಂಶೋಧನೆಯಲ್ಲಿ ಒಟ್ಟು ವಿದ್ಯಾರ್ಥಿನಿಯರಲ್ಲಿ ಅತಿಹೆಚ್ಚಿನ ಸಂಖ್ಯೆಯ ಅಂದರೆ ಶೇ 80ರಷ್ಟು ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳುವವರಾಗಿದ್ದಾರೆ ಪ್ರತಿಶತ 20ರಷ್ಟು ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆಯದೇ ಇದ್ದವರಾಗಿದ್ದಾರೆ.

ಈ ಮೇಲಿನ ಅಂಕಿ-ಅಂಶಗಳ ವಿವರಣೆಯಿಂದ ಕಂಡು ಬರುವುದೇನೆಂದರೆ ಬಹುಸಂಖ್ಯಾತ ವಿದ್ಯಾರ್ಥಿನಿಯರು ಬಡಕುಟುಂಬಗಳಿಂದ ಬಂದವರಾಗಿದ್ದಾರೆ. ಹೀಗಾಗಿ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳಲು ಅರ್ಹರಾಗಿದ್ದಾರೆ. ಆದರೆ ಕೆಲವು ಜನ ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳುವಲ್ಲಿ ಅನರ್ಹರಾಗಿದ್ದಾರೆ. ಕಾರಣ ಜನರ ಕುಟುಂಬದ ವಾರ್ಷಿಕ ಆದಾಯವು ಹೆಚ್ಚಿಗೆ ಇದ್ದಿರುವುದಾಗಿದೆ.

**ಕೋಷ್ಟಕ 4.14**

**ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳುವಾಗ ಮಹಾವಿದ್ಯಾಲಯದ ಸಿಬ್ಬಂದಿಯವರು ಮಾಮೂಲಿಯನ್ನು ಕೇಳುತ್ತಾರೆಯೇ ಎಂಬುದರ ಬಗ್ಗೆ ಅಭಿಪ್ರಾಯಗಳ ವರ್ಗೀಕರಣ**

| ಕ್ರ.ಸಂ. | ಅಭಿಪ್ರಾಯಗಳು | ಒಟ್ಟು | ಪ್ರತಿಶತ |
|---|---|---|---|
| 1 | ಹೌದು | 50 | 83.33 |
| 2 | ಇಲ್ಲ | 10 | 16.64 |
| | **ಒಟ್ಟು** | **60** | **100.00** |

ಈ ಕೋಷ್ಟಕದಿಂದ ತಿಳಿಯುವ ವಿಷಯವೇನೆಂದರೆ ಪ್ರತಿಶತ 83.33ರಷ್ಟು ವಿದ್ಯಾರ್ಥಿನಿಯರು ಶಿಷ್ಯವೇತನವನನು ಪಡೆದುಕೊಳ್ಳುವಾಗ ಮಹಾವಿದ್ಯಾಲಯದ ಸಿಬ್ಬಂದಿಯವರು ಮಾಮೂಲಿಯನ್ನು ಕೇಳುತ್ತಾರೆಂದು ಹೇಳಿದ್ದಾರೆ. ಪ್ರತಿಶತ 16.64ರಷ್ಟು ವಿದ್ಯಾರ್ಥಿನಿಯರು ಮಾತ್ರ ಶಿಷ್ಯವೇತನವನ್ನು ಪಡೆದುಕೊಳ್ಳುವಾಗ ಮಹಾ ವಿದ್ಯಾಲಯದ ಸಿಬ್ಬಂದಿಯವರು ಮಾಮೂಲಿಯನ್ನು ಕೇಳುವುದಿಲ್ಲ ಎಂದು ಸೂಚಿಸಿದ್ದಾರೆ.

ಈ ಮೇಲಿನ ಅಂಕಿ ಅಂಶಗಳ ವಿವರಣೆಯಿಂದ ತಿಳಿದುಬರುವ ಪ್ರಮುಖಸಂಗತಿ ಏನೆಂದರೆ ಭಾರತ ದೇಶದ ವಿವಿಧ ಇಲಾಖೆಗಳಲ್ಲಿ ಭ್ರಷ್ಟಾಚಾರ ವ್ಯಾಪಿಸಿರುವಂತೆಯೇ ಇಂದು ಕಾಲೇಜುಗಳಲ್ಲಿಯೇ ಸಹ ಪರಿಶಿಷ್ಟ ಜಾತಿ ವಿದ್ಯಾರ್ಥಿನಿಯರಿಗೆ ಶಿಷ್ಯವೇತನವನ್ನು ಕೊಡುವಾಗ ಕಾಲೇಜಿನ ಸಿಬ್ಬಂದಿಯವರು ಮಾಮೂಲಿಯನ್ನು ಕೇಳುತ್ತಿರುವ ಅಂಶ ಬೆಳಕಿಗೆ ಬಂದಿದೆ. ಈ ಒಂದು ಅಂಶವನ್ನು ಗಮನಿಸಿದಾಗ ತಿಳಿದುಬರುವುದೇನೆಂದರೆ ಸಾಮಾನ್ಯವಾಗಿ ಭ್ರಷ್ಟಾಚಾರವುಎಲ್ಲಾ ಕಡೆಗೂ ಬೇರು ಬಿಟ್ಟಂತಾಗಿದೆ ಎಂದು ಹೇಳಬಹುದಾಗಿದೆ.

**ಕೋಷ್ಟಕ 4.15**

**ವಿದ್ಯಾರ್ಥಿನಿಯರಿಗೆ ಶಿಷ್ಯವೇತನವು ಸರಿಯಾದ ಸಮಯಕ್ಕೆ ದೊರೆಯುತ್ತಿದೆಯೇ ಎಂಬುದರ ಬಗ್ಗೆ ಅಭಿಪ್ರಾಯಗಳ ವರ್ಗೀಕರಣ**

| ಕ್ರ.ಸಂ. | ಅಭಿಪ್ರಾಯಗಳು | ಒಟ್ಟು | ಪ್ರತಿಶತ |
|---|---|---|---|
| 1 | ದೊರೆಯುತ್ತದೆ | 16 | 26.66 |
| 2 | ದೊರೆಯುವುದಿಲ್ಲ | 44 | 73.33 |
| | **ಒಟ್ಟು** | **60** | **100.00** |

ಈ ಕೋಷ್ಟಕ ಸೂಚಿಸುವಂತೆ ಒಟ್ಟು ವಿದ್ಯಾರ್ಥಿನಿಯರಲ್ಲಿ ಪ್ರತಿಶತ 26.66 ವಿದ್ಯಾರ್ಥಿನಿಯರು ಶಿಷ್ಯವೇತನವು ಸರಿಯಾದ ಸಮಯಕ್ಕೆ ದೊರೆಯುತ್ತದೆ ಎಂದು ಹೇಳಿದ್ದರೆ ಪ್ರತಿಶತ 73.33ರಷ್ಟು ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಸರಿಯಾದ ಸಮಯಕ್ಕೆ ದೊರೆಯುವುದಿಲ್ಲವೆಂದು ಹೇಳಿದ್ದಾರೆ. ಅಂದರೆ ಅತಿಹೆಚ್ಚಿನ ಸಂಖ್ಯೆಯ ಶಿಷ್ಯವೇತನವು ದೊರೆಯುವುದಿಲ್ಲ. ಈ ಮೇಲಿನ ಅಂಕಿ ಅಂಶಗಳ ವಿಶ್ಲೇಷಣೆಯಿಂದ ಸ್ಪಷ್ಟವಾಗಿ ತಿಳಿದುಬರುತ್ತದೆ. ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರಲ್ಲಿ ಬಹುಸಂಖ್ಯಾತ ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಅನುಭವಿಸಿಯೇ ತಮ್ಮ ಶಿಕ್ಷಣವನ್ನು ಮುಂದುವರಿಸಿರುತ್ತಾರೆ.

ಕೋಷ್ಟಕ-4.16

**ಶಿಷ್ಯವೇತನದಿಂದ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದಿದ್ದಾಗ ವಿದ್ಯಾರ್ಥಿನಿಯರು ಆಗ ತಮ್ಮ ಶೈಕ್ಷಣಿಕ ಅಗತ್ಯವನ್ನು ಹೇಗೆ ಈಡೇರಿಸಿಕೊಳ್ಳುತ್ತಾರೆ? ಎಂಬುದರ ಬಗ್ಗೆ ಅಭಿಪ್ರಾಯಕ್ಕೆ ವರ್ಗೀಕರಣ**

| ಕ್ರ.ಸಂ. | ಅಭಿಪ್ರಾಯಗಳು | ಒಟ್ಟು | ಪ್ರತಿಶತ |
|---|---|---|---|
| 1 | ಪಾಲಿಕೆಯಿಂದ | 49 | 81.66 |
| 2 | ತಾತ್ಕಾಲಿಕ ಉದ್ಯೋಗದಿಂದ | 7 | 11.66 |
| 3 | ಸಂಬಂಧಿಕರಿಂದ | 2 | 3.33 |
| 4 | ಗೆಳೆಯರಿಂದ | 1 | 1.66 |
| 5 | ಇತರೆ | 1 | 1.66 |
| | **ಒಟ್ಟು** | **60** | **100.00** |

ಈ ಕೋಷ್ಟಕದಲ್ಲಿ ಕಂಡುಬರುವಂತಹ ವಿಷಯವೆಂದರೆ ಪ್ರತಿಶತ 81.66 ವಿದ್ಯಾರ್ಥಿನಿಯರು ತಮಗೆ ಬರುವ ಶಿಷ್ಯವೇತನದಿಂದ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದಿದ್ದಾಗ ತಮ್ಮ ಪಾಲಕರಿಂದ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳುತ್ತಿದ್ದರೆ ಪ್ರತಿಶತ 11.66 ರಷ್ಟು ವಿದ್ಯಾರ್ಥಿನಿಯರು ತಾತ್ಕಾಲಿಕ ಉದ್ಯೋಗದಿಂದ ಪ್ರತಿಶತ 3.33ರಷ್ಟು ಸಂಬಂಧಿಕರಿಂದ ಪ್ರತಿಶತ 1.66ರಷ್ಟು ವಿದ್ಯಾರ್ಥಿನಿಯರು ತಮ್ಮ ಸ್ನೇಹಿತರಿಂದ ತಮ್ಮ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳುತ್ತೇವೆಂದು ನುಡಿದಿದ್ದಾರೆ.

ಈ ಮೇಲಿನ ಅಂಕಿ-ಅಂಶಗಳ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ ಅಧಿಕ ಸಂಖ್ಯೆಯ ವಿದ್ಯಾರ್ಥಿನಿಯರು ತಮ್ಮ ಪಾಲಕರಿಂದ ತಮ್ಮ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಕೊಳ್ಳುವವರಾಗಿದ್ದಾರೆ. ಇದರಂತೆಯೇ ಕೆಲವು ಜನ ವಿದ್ಯಾರ್ಥಿನಿಯರು ತಾತ್ಕಾಲಿಕ ಉದ್ಯೋಗಗಳಿಂದ ಟೇಲರಿಂಗ್, ಊದುಬತ್ತಿ, ಮೇಣಬತ್ತಿ ತಯಾರಿಸುವಿಕೆ. ಇವೇ ಮುಂತಾದ ತಾತ್ಕಾಲಿಕ ಉದ್ಯೋಗಗಳನ್ನು ಮಾಡುವುದರ ಮೂಲಕ ತಮ್ಮ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳುತ್ತಿದ್ದಾರೆ. ಹಾಗೇ ಕೆಲವು

ಜನ ವಿದ್ಯಾರ್ಥಿನಿಯರು ವಿವಾಹಿತರಾಗಿರುವುದರಿಂದ ಅವರು ತಮ್ಮ ಗಂಡನ ದುಡಿಮೆಯಿಂದ ಬರುವ ಆದಾಯದಿಂದ ತಮ್ಮ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳುತ್ತಿದ್ದೇವೆಂದು ಸೂಚಿಸಿದ್ದಾರೆ.

ಹೀಗೆ ಈ ಅಧ್ಯಯನದಲ್ಲಿ ಪರಿಶಿಷ್ಟಜಾತಿಯವರ ವಿದ್ಯಾರ್ಥಿನಿಯರ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಯನ್ನು ವಿಶ್ಲೇಷಣೆ ಮಾಡಲಾಗಿದೆ.

## 4.2 ವೈವಾಹಿಕ ಸಮಸ್ಯೆ

ವಿವಾಹ ಸಹ ಒಂದು ಪ್ರಮುಖವಾದ್ದಂತಹ ಸಾಮಾಜಿಕ ಸತ್ಯವಾಗಿದೆ. ಭಾರತೀಯ ಹಿಂದೂ ಸಂಪ್ರದಾಯದ ಪ್ರಕಾರ ವಿವಾಹವು ಹಿಂದೂಗಳಿಗೆ ಎಂದು ಬಿಡಿಸಲಾಗದ ಬಂಧನವಾಗಿತ್ತು. ಆದರೆ ಪಾಶ್ಚಾತ್ಯದಲ್ಲಿ ಒಂದು ಒಪ್ಪಂದವಾಗಿತ್ತು.[4] ಭಾರತೀಯ ಸಮಾಜವು ಸಾಮಾಜಿಕ ಸ್ತರವಿನ್ಯಾಸದಿಂದ ಕೂಡಿದ್ದು. ಜಾತಿಪದ್ಧತಿಯ ಆಧಾರದ ಮೇಲೆ ರಚಿಸಲ್ಪಟ್ಟಿದೆ. ಆಯಾ ಜಾತಿಗೆ ಸೇರಿದವರು ಅದೇ ಜಾತಿಯ ಒಳಗೆ ಮಾತ್ರ ವಿವಾಹ ಮಾಡಿಕೊಳ್ಳುತ್ತಿದ್ದರು. ಅಲ್ಲದೆ ಬಾಲಕಿಯರಿಗೆ 12 ವರ್ಷದೊಳಗೆ ವಿವಾಹ ಮಾಡುತ್ತಿದ್ದರು. ಆದರೆ 1929ರ ಬಾಲ್ಯವಿವಾಹ ನಿಷೇಧ ಕಾಯ್ದೆಯು ವಿವಾಹದ ವಯಸ್ಸನ್ನು 18 ವರ್ಷಗಳಿಗೆ ನಿಗಧಿ ಮಾಡಿದೆ. ಇತ್ತೀಚೆಗೆ ಸ್ತ್ರೀಯರು ಉನ್ನತ ಶಿಕ್ಷಣದಿಂದಾಗಿ ವಿವಾಹದ ವಯಸ್ಸಿನಲ್ಲಿ ಹೆಚ್ಚಳವಾಗಿದೆ. ಇದರಿಂದಾಗಿ ಇಂದು ಸ್ತ್ರೀಯರು ಜಾತಿಪದ್ಧತಿಯ ಕೆಲವು ನಿಯಮಗಳನ್ನು ಬದಿಗೊತ್ತಿ ಅಂತರ್‌ಜಾತಿ ವಿವಾಹ, ಸರಳ ವಿವಾಹವಾಗಲೂ ಹೆಚ್ಚು ಇಷ್ಟಪಡುತ್ತಾರೆ. ಅವರುಗಳಲ್ಲಿ ಪ್ರಮುಖವಾಗಿ ಕಂಡುಬರುವ ಅಂಶಗಳೆಂದರೆ ಸಾಮಾಜಿಕವಾಗಿ ಬದಲಾವಣೆಯನ್ನುಂಟು ಮಾಡುವುದಾಗಿದೆ. ಉನ್ನತ ಶಿಕ್ಷಣ ಪಡೆಯುತ್ತಿರುವಂತಹ ವಿದ್ಯಾರ್ಥಿನಿಯರನ್ನು ಸಂದರ್ಶಿಸಿ ವಿವಾಹದ ಬಗ್ಗೆ ಅವರ ಅಭಿಪ್ರಾಯವನ್ನು ಕೇಳಿದಾಗ ಈ ರೀತಿಯಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದರು.

## ಕೋಷ್ಟಕ 4.17

## ವಿವಾಹದ ಆಯ್ಕೆಯ ಹಿನ್ನಲೆ

| ಕ್ರ.ಸಂ. | ವಿವಾಹ ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಸರಳ ವಿವಾಹ | 22 | 33.66 |
| 2 | ಮಧ್ಯಮವರ್ಗ | 13 | 21.66 |
| 3 | ಉನ್ನತ ವರ್ಗ | 9 | 15.00 |
| 4 | ಅಂತರ್‌ಜಾತಿ | 16 | 26.66 |
| | ಒಟ್ಟು | 60 | 100.00 |

ಈ ಮೇಲ್ಕಂಡ ಪಟ್ಟಿಯಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವಾಗ ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರ ವಿವಾಹದ ಬಗ್ಗೆ ಈ ರೀತಿ ಹೇಳಿದ್ದಾರೆ. ಆರ್ಥಿಕ ದೃಷ್ಟಿಯಿಂದ ಸರಳ ವಿವಾಹವನ್ನು ಮಾಡಿಕೊಳ್ಳಲಿಚ್ಚಿಸುವವರು. ಶೇಕಡ 36.66ರಷ್ಟು ಶೇಕಡ 21.66ರಷ್ಟು ವಿದ್ಯಾರ್ಥಿನಿಯರು ಮಾಧ್ಯಮ ವರ್ಗದ ವಿವಾಹವನ್ನು ಶೇಕಡ 15ರಷ್ಟು ವಿದ್ಯಾರ್ಥಿನಿಯರು ಉನ್ನತ ವರ್ಗದ ವಿವಾಹವನ್ನು ಹಾಗೂ ಶೇ. 26.66ರಷ್ಟು ವಿದ್ಯಾರ್ಥಿನಿಯರು ಜಾತಿ ಪದ್ಧತಿಯಲ್ಲಿದ್ದಂತಹ ನೀತಿ-ನಿಯಮಗಳನ್ನು ಉಲ್ಲಂಘಿಸಿ ಸಮಾಜದಲ್ಲಿ ಸಮಾನತೆಯಿರಬೇಕು ಮೇಲು-ಕೀಳೆಂಬ ಭಾವನೆಯಿರಬಾರದೆಂಬ ಆಂತರ್‌ಜಾತಿಯ ವಿವಾಹವನ್ನು ಆಯ್ಕೆ ಮಾಡಿಕೊಂಡಿರುತ್ತಾರೆ.

ಇಂದು ಸ್ತ್ರೀಯರಿಗೆ ಉನ್ನತ ಶಿಕ್ಷಣದ ಅವಕಾಶವಿರುವುದರಿಂದ ಉದ್ಯೋಗಾವಕಾಶಗಳು ಬದಲಾಗಿವೆ. ಅಲ್ಲದೆ ವರದಕ್ಷಿಣೆ ಪದ್ಧತಿಯು ವಿವಾಹವನ್ನು ಮತ್ತಷ್ಟು ಸರಳಗೊಳಿಸಿದೆ. ಶೈಕ್ಷಣಿಕ ಸೌಲಭ್ಯಗಳು ಅಧಿಕವಾಗಿರುವುದರಿಂದ ಇಂದು ವಿವಾಹದ ಬಂಧನ ಹೊಸ ಅರ್ಥ ಪಡೆಯುತ್ತಿದೆ.

ವಿದ್ಯಾರ್ಥಿನಿಯರನ್ನು ಕುರಿತು ನೀವು ಸ್ತ್ರೀಯರಾಗಿ ಯಾವ ವಿಷಯಗಳ ಬಗ್ಗೆ ಹೆಚ್ಚು ಒತ್ತು ಕೊಡಲು ಬಯಸುತ್ತೀರಾ ಎಂದು ಸಂದರ್ಶಿಸಿದಾಗ ಪ್ರತಿವಾದಿಗಳ ಉತ್ತರವನ್ನು ಕೆಳಕಂಡ ಪಟ್ಟಿಯಲ್ಲಿ ವಿಶ್ಲೇಷಿಸಲಾಗಿದೆ.

## ಕೋಷ್ಟಕ 4.18

## ವಿದ್ಯಾರ್ಥಿನಿಯರು ನೀವು ಸ್ತ್ರೀಯರಾಗಿ ಯಾವ ವಿಷಯಕ್ಕೆ ಒತ್ತು ಕೊಡುತ್ತೀರಾ ಎಂದಾಗ ನೀಡಿದ ವಿವರಣೆ

| ಕ್ರ.ಸಂ. | ವರ್ಗೀಕರಣ | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಶಿಕ್ಷಣ | 22 | 10.33 |
| 2 | ಉದ್ಯೋಗ | 20 | 33.33 |
| 3 | ವಿವಾಹ | 7 | 11.66 |
| 4 | ಎಲ್ಲವುಗಳನ್ನು | 22 | 36.66 |
| | **ಒಟ್ಟು** | **60** | **100.00** |

ಮೇಲಿನ ಪಟ್ಟಿಯಲ್ಲಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಯರಲ್ಲಿ ಶೇಕಡ 10.33ರಷ್ಟು ಶಿಕ್ಷಣಕ್ಕೂ ಶೇಕಡ 33.33 ಉದ್ಯೋಗಕ್ಕೂ ಶೇಕಡ 11.66ರಷ್ಟು ವಿವಾಹಕ್ಕೆ ಶೇಕಡ 36.66ರಷ್ಟು ವಿದ್ಯಾರ್ಥಿನಿಯರು ಶಿಕ್ಷಣ, ಉದ್ಯೋಗ ಮತ್ತು ವಿವಾಹಕ್ಕೆ ಹೆಚ್ಚಿನ ಆಧ್ಯತೆಯನ್ನು ನೀಡಿದ್ದಾರೆ.

ಇದರಿಂದ ತಿಳಿದುಬರುವ ಪ್ರಮುಖ ಅಂಶವೆಂದರೆ ಶಿಕ್ಷಣ ಉದ್ಯೋಗ ಮತ್ತು ವಿವಾಹಕ್ಕೆ ಪರಸ್ಪರ ಸಂಬಂಧವಿದೆ. ಹೆಚ್ಚಿನ ವಿದ್ಯಾರ್ಥಿನಿಯರು ಶಿಕ್ಷಣಕ್ಕೆ ಪ್ರಥಮ ಆದ್ಯತೆಯನ್ನು ನೀಡಿದ್ದಾರೆ. ಹೆಣ್ಣುಮಕ್ಕಳಿಗೆ ಶಿಕ್ಷಣದ ಅಗತ್ಯ. ಶಿಕ್ಷಣ ಎಷ್ಟು ಅವಶ್ಯಕವೋ ಅದೇ ರೀತಿ ಉದ್ಯೋಗವು ಅವಶ್ಯಕ. ಉದ್ಯೋಗವಿದ್ದರೆ ಸ್ತ್ರೀಯರು ಆರ್ಥಿಕವಾಗಿ ಸ್ವತಂತ್ರವಾಗಿರ ಬಹುದು. ಹಾಗೆಯೇ ಸಮಾಜದಲ್ಲಿ ವಿವಾಹವು ಅಷ್ಟೇ ಪ್ರಮುಖವಾದುದು. ಸಮಾಜದಲ್ಲಿ ಸ್ತ್ರೀ ಒಂಟಿಯಾಗಿ ಜೀವಿಸಲುಸಾಧ್ಯವಿಲ್ಲ. ಇದರಿಂದ ಶಿಕ್ಷಣ, ಉದ್ಯೋಗ ಎಷ್ಟು ಅವಶ್ಯಕವೋ ಅಷ್ಟೇ ವಿವಾಹವು ಅವಶ್ಯಕವೆಂದಿದ್ದಾರೆ.

ಜಾತಿ ಮನೋಭಾವನೆಯು ಶಿಕ್ಷಣದಿಂದ ಬದಲಾಗಿದೆ. ಜಾತೀಯತೆಯು ಪ್ರಾರಂಭಿಕ ಹಂತದಲ್ಲಿ ಹೆಚ್ಚಿನದಾಗಿ ಮನೆಯ ಪರಿಸರದಲ್ಲಿ ಕಂಡುಬರುತ್ತದೆ. ನಂತರ ಉನ್ನತ ಶಿಕ್ಷಣದಿಂದಾಗಿ ಜಾತೀಯತೆಯಲ್ಲಿ ಮೇಲು-ಕೀಳು ಭಾವನೆ ಕಡಿಮೆಯಾಗುತ್ತದೆ.ಎಲ್ಲಾ ಜಾತಿಯವರು ಒಂದು ಕಡೆ ಸೇರಿದಾಗ ಹೊಂದಾಣಿಕೆಯ ಮನೋಭಾವನೆ ಬೆಳೆಯುತ್ತದೆ. ಶೈಕ್ಷಣಿಕವಾಗಿ ಪರಿಶಿಷ್ಟ ಜಾತಿಯವರು

ಉನ್ನತ ಶಿಕ್ಷಣವನ್ನು ಪಡೆದುಕೊಂಡವವರನ್ನು ಮೇಲಿನ ಜಾತಿಯವರು ಉನ್ನತ ಸ್ಥಾನಮಾನವನ್ನು ನೀಡಿ ಗೌರವಿಸುತ್ತಾರೆ. ಅದಕ್ಕೂ ಸಾಮಾಜಿಕವಾಗಿ ಪರಿಶಿಷ್ಟಯವರೆಂದೇ ಗುರ್ತಿಸುತ್ತಾರೆ. ಆದರೆ ಇತರೆಯವರಾಗಿ ನಮ್ಮನ್ನು ಹೋಲಿಸಿದಾಗ ಮಾದರಿಯಾಗಿ ತೆಗೆದುಕೊಳ್ಳುತ್ತಾರೆ.

**ಕೋಷ್ಟಕ 4.19**

**ವಿದ್ಯಾರ್ಥಿನಿಯರು ಹೆಚ್ಚಾಗಿ ಯಾವ ತೆರನಾದ ವಿವಾಹವನ್ನು ಬಯಸುತ್ತಾರೆಂಬುದನ್ನು ವಿವರಣೆಯನ್ನು ನೀಡುತ್ತದೆ.**

| ಕ್ರ.ಸಂ. | ಬಯಸಿದ ವಿವಾಹ | ಒಟ್ಟು | ಪ್ರತಿಶತ |
|---|---|---|---|
| 1 | ಪ್ರೇಮವಿವಾಹ | 5 | 8.33 |
| 2 | ಸಂಪ್ರದಾಯ ವಿವಾಹ | 22 | 36.66 |
| 3 | ನೋಂದಣಿ ವಿವಾಹ | 13 | 21.66 |
| 4 | ಅಂತರ್‌ಜಾತಿ ವಿವಾಹ | 13 | 21.66 |
| 5 | ಇತರೆ | 7 | 11.66 |
| | **ಒಟ್ಟು** | **60** | **100.00** |

ಒಟ್ಟು ವಿದ್ಯಾರ್ಥಿನಿಯರಲ್ಲಿ ಪ್ರತಿಶತ 8.33ರಷ್ಟು ವಿದ್ಯಾರ್ಥಿನಿಯರು ಹೆಚ್ಚಾಗಿ ಪ್ರೇಮಪಿವಾಹವನ್ನು ಬಯಸಿದ್ದಾರೆ. ಆದರೆ ಅತಿಹೆಚ್ಚಿನ ಸಂಖ್ಯೆಯು ಅಂದರೆ ಪ್ರತಿಶತ 36.66ರಷ್ಟು ವಿದ್ಯಾರ್ಥಿನಿಯರು ಹೆಚ್ಚಾಗಿ ಸಂಪ್ರದಾಯಬದ್ಧ ವಿವಾಹವನ್ನು ಅಪೇಕ್ಷಿಸಿದ್ದಾರೆ. ಇದರಂತೆಯೇ ಪ್ರತಿಶತ 21.66 ಶಿಕ್ಷಣ ವಿದ್ಯಾರ್ಥಿನಿಯರು ಹೆಚ್ಚಾಗಿ ನೋಂದಣಿ ವಿವಾಹವನ್ನು ಹಾಗೂ ಪ್ರತಿಶತ 21.66ರಷ್ಟು ವಿದ್ಯಾರ್ಥಿನಿಯರು ಹೆಚ್ಚಾಗಿ ಅಂತರಜಾತಿಯ ವಿವಾಹವನ್ನು ಬಯಸಿದ್ದಾರೆ.

ಈ ಮೇಲಿನ ಅಂಕಿ ಅಂಶಗಳ ವಿಶ್ಲೇಷಣೆಯಿಂದ ಸ್ಪಷ್ಟವಾಗಿ ತಿಳಿದು ಬರುವುದೇನೆಂದರೆ ಅತಿಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿನಿಯರು ಸಂಪ್ರದಾಯ ಬದ್ಧವಾದ ವಿವಾಹವನ್ನು ಬಯಸಿದ್ದಾರೆ. ಗ್ರಾಮೀಣ ಪ್ರದೇಶದ ಪರಿಶಿಷ್ಟಜಾತಿ ವಿದ್ಯಾರ್ಥಿನಿಯರು ಇಂತಹ ಒಂದು ಬಳಕೆಯನ್ನು ಹೆಚ್ಚಾಗಿ ಹೊಂದಿದ್ದಾರೆ.

ಕೋಷ್ಟಕ : 4.20

ವಿದ್ಯಾರ್ಥಿನಿಯರು ಒಪ್ಪುವ ಅಂತರಜಾತಿಯ ವಿವಾಹಗಳ ವರ್ಗೀಕರಣ.

| ಕ್ರ.ಸಂ. | ಅಂತರ್‌ಜಾತಿಯ ವಿವಾಹಗಳು | ಒಟ್ಟು | ಪ್ರತಿಶತ |
|---|---|---|---|
| 1 | ಪರಿಶಿಷ್ಟ ಜಾತಿಯ ಉಪಜಾತಿಗಳಲ್ಲಿ | 10 | 76.92 |
| 2 | ಪರಿಶಿಷ್ಟ ಜಾತಿ ಮತ್ತು ಮೇಲ್ಜಾತಿಯವರ ನಡುವೆ | 3 | 23.08 |
| | ಒಟ್ಟು | 13 | 100.00 |

ಈ ಮೇಲ್ಕಂಡ ಕೋಷ್ಟಕವನ್ನು ಗಮನಿಸಿದ್ದಾಗ ಸಂಶೋಧನಾ ಅಧ್ಯಯನದ ಒಟ್ಟು ವಿದ್ಯಾರ್ಥಿನಿಯರಲ್ಲಿ ಅತಿ ಹೆಚ್ಚಿನ ಸಂಖ್ಯೆಯೆಂದರೆ ಪ್ರತಿಶತ 76.92ರಷ್ಟು ವಿದ್ಯಾರ್ಥಿನಿಯರು ಪರಿಶಿಷ್ಟ ಜಾತಿಯ ಉಪಜಾತಿಗಳಲ್ಲಿಯೂ ಅಂತರಜಾತಿಯ ವಿವಾಹವನ್ನು ಒಪ್ಪುವುದಾಗಿದೆ. ಹಾಗೇ ಪ್ರತಿಶತ 23.08ರಷ್ಟು ವಿದ್ಯಾರ್ಥಿನಿಯರು ಪರಿಶಿಷ್ಟಜಾತಿ/ಮೇಲ್ಜಾತಿಯವರ ನಡುವಿನ ಅಂತರಜಾತಿಯ ವಿವಾಹವನ್ನು ವ್ಯಕ್ತಪಡಿಸಿದ್ದಾರೆ.

ವಿದ್ಯಾರ್ಥಿನಿಯರು ಪರಿಶಿಷ್ಟಜಾತಿಯ ಹಾಗೂ ಮೇಲ್ಜಾತಿಯವರ ನಡುವಿನ ಅಂತರಜಾತಿಯ ವಿವಾಹವನ್ನು ಒಪ್ಪುವುದಾಗಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಇದರಿಂದ ತಿಳಿದು ಬರುವುದೇನೆಂದರೆ ಕೆಲವು ಜನ ವಿದ್ಯಾರ್ಥಿನಿಯರು ಪರಿಶಿಷ್ಟಜಾತಿಯ ಹಾಗೂ ಮೇಲ್ಜಾತಿಯವರ ನಡುವೆ ವಿವಾಹವಾಗುವುದರ ಬಗ್ಗೆ ಅಭಿಪ್ರಾಯ ವ್ಯಕ್ತಪಡಿಸುತ್ತ ಹೀಗೆ ಮಾಡುವುದರಿಂದ ಸಮಾಜದಲ್ಲಿ ನಮ್ಮ ಸಾಮಾಜಿಕ ಸ್ಥಾನಮಾನವನ್ನು ಹೆಚ್ಚಿಸಿಕೊಳ್ಳುವುದು ಮಾತ್ರವಲ್ಲದೇ ಸಮಾಜದಲ್ಲಿ ಸಾಮಾಜಿಕ ಐಕ್ಯತೆಯನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ ಎಂದು ತಿಳಿಸಿದ್ದಾರೆ.

## ಸಂಗಾತಿಯ ಆಯ್ಕೆಯಲ್ಲಿ ಇರುವ ಗುಣಗಳು

ನೀವು ನಿಮ್ಮ ಸಂಗಾತಿಯ ಆಯ್ಕೆಯಲ್ಲಿ ಯಾವ ರೀತಿಯ ಗುಣಗಳನ್ನು ಬಯಸುತ್ತೀರಾ? ಎಂದು ಹೇಳಿಕೇಳಿದ ಪ್ರಶ್ನೆಗೆ ಬಹುಸಂಖ್ಯೆಯ ಉತ್ತರಗಳು ಬಂದಿರುವುದನ್ನು ಗಮನಿಸಬಹುದು.

**ಕೋಷ್ಟಕ-4.21**

| ಕ್ರ.ಸಂ. | ಗುಣಗಳು | ಪುನರಾವರ್ತನೆ | ಶೇಕಡಾವಾರು |
|---|---|---|---|
| 1 | ಕುಟುಂಬದ ಆರ್ಥಿಕ ಪರಿಸ್ಥಿತಿ | 3 | 5.00 |
| 2 | ಕುಟುಂಬದ ಸಾಮಾಜಿಕ ಪರಿಸ್ಥಿತಿ | 3 | 5.00 |
| 3 | ಶೈಕ್ಷಣಿಕ ಅರ್ಹತೆ | 6 | 10.00 |
| 4 | ಉದ್ಯೋಗ | 13 | 21.66 |
| 5 | ಸುಂದರತೆ | 14 | 23.33 |
| 6 | ಅತ್ತೆ-ಮಾವನವರ ಗುಣ | 2 | 3.33 |
| 7 | ಗ್ರಾಮೀಣ ನಗರ ಆಧಾರ | 3 | 5.00 |
| 8 | ಉತ್ತಮ ನಡವಳಿಕೆ | 16 | 26.66 |
| | **ಒಟ್ಟು** | **60** | **100.00** |

ಈ ಮೇಲ್ಕಂಡ ವಿವರಣೆಯಿಂದ ತಿಳಿದು ಬರುವ ವಿಷಯವೇನೆಂದರೆ ಸಂದರ್ಶಿಸಿದ ಸುಮಾರು ಶೇಕಡ (26.66) ವಿದ್ಯಾರ್ಥಿನಿಯರು ತಮ್ಮ ಸಂಗಾತಿಯಲ್ಲಿ ಉತ್ತಮ ನಡವಳಿಕೆಯನ್ನು ಬಯಸುತ್ತಾರೆ. ಅದೇ ರೀತಿಯಲ್ಲಿ ಶೇಕಡ 23.33ರಷ್ಟು ವಿದ್ಯಾರ್ಥಿಯು ತಮ್ಮ ಸಂಗಾತಿಯಲ್ಲಿ ಸುಂದರತೆಯನ್ನು ಬಯಸುತ್ತಾರೆ. ಹಾಗೆಯೇ ಶೇತ 21.66ರಷ್ಟು ವಿದ್ಯಾರ್ಥಿನಿಯರುತಮ್ಮ ಸಂಗಾತಿಯಲ್ಲಿ ಒಳ್ಳೆಯ ಉದ್ಯೋಗವನ್ನು ಬಯಸುತ್ತಾರೆ. ಶೇ. 6 ಅಂದರೆ ಶೇ. (10.00) ವಿದ್ಯಾರ್ಥಿಯು ಉತ್ತಮ ಶೈಕ್ಷಣಿಕ ಹಿನ್ನೆಲೆಯನ್ನು ಬಯಸುತ್ತಾರೆ. ಹೀಗೆ ಅತ್ಯಂತ ಕಡಿಮೆ ಪ್ರಮಾಣದ ವಿದ್ಯಾರ್ಥಿಯರಲ್ಲಿ ಆರ್ಥಿಕತೆ ಮತ್ತು ಸಾಮಾಜಿಕ ಪರಿಸ್ಥಿತಿ ಅಂದರೆ ಶೇ. 5 ಮತ್ತು 5ರಷ್ಟು ಮಾತ್ರ ವಿದ್ಯಾರ್ಥಿಗಳು ಬಯಸಿರುವುದು ಕಂಡುಬರುತ್ತವೆ.

ಹೀಗೆ ಈ ಮೇಲ್ಕಂಡ ವಿವರಣೆಯಿಂದ ಅತಿ ಹೆಚ್ಚು ವಿದ್ಯಾರ್ಥಿಯು ಸುಂದರತೆ ಮತ್ತು ಉತ್ತಮ ನಡವಳಿಕೆಯಿರುವ ಸಂಗಾತಿಯ ಬಯಸುವುದು ಸಹಜವಾಗಿದೆ ಅಂದರೆ ಇವರಲ್ಲೂ ಸಹ ಒಂದು ರೀತಿಯ ಜಾಗರೂಕತೆಯೂ ಬಂದಿರುವುದು ತಿಳಿದು ಬಂದಿದೆ. ಎಂದು ಈ ಕೋಷ್ಟಕ ವಿವರಣೆಯನ್ನು ನೀಡುತ್ತಿದೆ.

**ಕೋಷ್ಠಕ-4.22**

**ನಿಮ್ಮ ವಿವಾಹದ ವಿಷಯದಲ್ಲಿ ಹೆಚ್ಚು ಪ್ರಮುಖ ಪಾತ್ರ ವಹಿಸಿದ್ದವರು ಯಾರು ಎಂಬುದರ ಬಗ್ಗೆ**

| ಕ್ರ.ಸಂ. | ವ್ಯಕ್ತಿಗಳು | ಒಟ್ಟು | ಪ್ರತಿಶತ |
|---|---|---|---|
| 1 | ತಂದೆ-ತಾಯಿ | 38 | 63.33 |
| 2 | ಅಣ್ಣ-ತಮ್ಮಂದಿರು | 6 | 10.00 |
| 3 | ಸಂಬಂಧಿಕರು | 6 | 10.00 |
| 4 | ಸ್ನೇಹಿತರು | 3 | 5.00 |
| 5 | ತಾನೇ | 10 | 16.64 |
| | **ಒಟ್ಟು** | **60** | **100.00** |

ಈ ಮೇಲ್ಕಂಡ ಕೋಷ್ಠಕವನ್ನು ಸಂದರ್ಶಿಸಿದ 60ರಷ್ಟು ವ್ಯಕ್ತಿಗಳಲ್ಲಿ ಶೇ. 63.33ರಷ್ಟು ವಿದ್ಯಾರ್ಥಿನಿಯರ ಮದುವೆ ವಿಷಯದಲ್ಲಿ ತಂದೆ-ತಾಯಿಯರ ಪಾತ್ರ ಪ್ರಮುಖವಾದ್ದು ಅದಕ್ಕೆಪ್ರತಿಯಾಗಿ ಶೇ. 16.64ರಷ್ಟು ಮಹಿಳೆಯರು ಮದುವೆ ವಿಷಯದಲ್ಲಿ ಸ್ವತಃ ತಾವೇ ನಿರ್ಧಾರವನ್ನು ಕೈಗೊಳ್ಳುತ್ತಾರೆ. ಹಾಗೆಯೇ ಶೇ. 10.00 ವಿದ್ಯಾರ್ಥಿಗಳಲ್ಲಿ ವಿಷಯದಲ್ಲಿ ಅಣ್ಣ ತಮ್ಮಂದಿರು ಮತ್ತು 10.00 ವಿದ್ಯಾರ್ಥಿಯರಲ್ಲಿ ಮದುವೆಯಾಗಿರುವ ಬಗ್ಗೆ ಮತ್ತು ಅತ್ಯಂತ ಕಡಿಮೆ ಪ್ರಮಾಣದಲ್ಲಿ ಶೇ. (5.00) ನಿಷ್ಕರ್ಷಗಳು ಸ್ನೇಹಿತರು ಪ್ರಮುಖವಾದ ಪಾತ್ರವನ್ನು ವಹಿಸುತ್ತಾರೆಂದು ಹೇಳಬಹುದು.

ಈ ಮೇಲ್ಕಂಡ ವಿವರಣೆಯಿಂದ ತಿಳಿದು ಬರುವ ವಿಷಯವೆಂದರೆ ಹೆಚ್ಚಿನ ವಿದ್ಯಾರ್ಥಿಯ ಮದುವೆಯ ವಿಷಯದಲ್ಲಿ ತಂದೆ ತಾಯಿಯರ ಪಾತ್ರವು ಪ್ರಮುಖವಾದದ್ದು ಅಲ್ಲದೆ ತಾವೂ ಸಹ ಈ

ವಿಷಯದಲ್ಲಿ ನಿರ್ಧಾರವನ್ನು ಕೈಗೊಳ್ಳುತ್ತೇವೆ. ಅಂದರೆ ಸ್ತ್ರೀ ಸಬಲೀಕರಣದಿಂದ ಮತ್ತೆ ಲಕ್ಷಾಂತರ ಮಹಿಳೆಯರಲ್ಲಿ ಮದುವೆಯ ವಿಷಯದಲ್ಲಿ ತಾವೇ ನಿರ್ಧಾರವನ್ನು ಕೈಗೊಳ್ಳುತ್ತಾರೆ ಎಂದು ತಿಳಿಯಬಹುದು.

### 4.2.1 ವರದಕ್ಷಿಣೆ ಸಮಸ್ಯೆ

ವರದಕ್ಷಿಣೆ ಎಂಬುದು ಭಾರತದಲ್ಲಿ ಕಾಣಬರುವ ಒಂದು ವಿಶಿಷ್ಟ ಹಾಗೂ ವಿಚಿತ್ರ ತೆರನಾದ ಸಾಮಾಜಿಕ ಸಮಸ್ಯೆಯಾಗಿದೆ. ವಿವಾಹದ ಸಂದರ್ಭದಲ್ಲಿ ವಧುವಿನ ಮನೆಯವರು ಮನಃ ಸಂತೋಷದಿಂದ ಚಳುವಳಿಯ ರೂಪದಲ್ಲಿ ಒಂದಷ್ಟು ಚಿನ್ನಾಭರಣ ಅಥವಾ ಹಣವನ್ನು ವಧುವಿಗೆ ನೀಡುತ್ತಿದ್ದಂತಹ ಈ ಹಿಂದಿನ ಪದ್ಧತಿ ಮರೆಯಾಗಿ ವರನು ಕೇಳಿದಷ್ಟು ಹಣ ಅಥವಾ ಚಿನ್ನಾಭರಣವನ್ನು ಕೊಡುವ ಮನಸ್ಸು ಅಥವಾ ಸಾಮರ್ಥ್ಯವಿಲ್ಲದಿದ್ದರೂ ಒತ್ತಾಯಕ್ಕೆ ಬಲಿಬಿದ್ದು ವರದಕ್ಷಿಣೆಯ ರೂಪದಲ್ಲಿ ಕೊಡುವಂತಹ ಪದ್ಧತಿ ಭಾರತದಲ್ಲಿ ವಿಕಾಸಗೊಂಡಿದ್ದು ತೀರಾ ವಿಚಿತ್ರವೆನಿಸುವುದು ಇಂತಹ ವಿಚಿತ್ರ ಪದ್ಧತಿ ಒಂದು ಪಿಡುಗಿನಂತೆ ಕಾಡುತ್ತಿರುವುದು ಭಾರತದಲ್ಲಿ ಮಂತ್ರವಾಗಿದೆ.[5]

**ಕೋಷ್ಟಕ-4.23**

**ಪ್ರಸ್ತುತ ಅಧ್ಯಯನದಲ್ಲಿ ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರು ಉನ್ನತ ಶಿಕ್ಷಣದಲ್ಲಿ ನಾವು ಕೇಳಿದ ಪ್ರಶ್ನೆ ನೀವು ಮದುವೆಯಾಗಿರುವಂತಹ ವಿದ್ಯಾರ್ಥಿನಿಗೆ ವರದಕ್ಷಿಣೆಯ ಸಮಸ್ಯೆಯನ್ನು ಅನುಭವಿಸುವಿರಾ?**

| ಕ್ರ.ಸಂ. | ಪ್ರತಿಕ್ರಮಣಿಕೆ | ಒಟ್ಟು | ಪ್ರತಿಶತ |
|---|---|---|---|
| 1 | ಹೌದು | 04 | 44.44 |
| 2 | ಇಲ್ಲ | 05 | 35.56 |
| | **ಒಟ್ಟು** | **09** | **100.00** |

ಈ ಮೇಲ್ಕಂಡ ವಿವರಣೆಯಲ್ಲಿ ಅಂದರೆ ನಮ್ಮ ಅಧ್ಯಯನದಲ್ಲಿ ಸಂದರ್ಶಿಸಿದ 60 ವಿದ್ಯಾರ್ಥಿಯರಲ್ಲಿ ಕೇವಲ 9 ಜನ ವಿದ್ಯಾರ್ಥಿಯು ವಿವಾಹಿತರಾಗಿದ್ದಾರೆ. ಇವರಲ್ಲಿ 4 ಜನ ( 44.44)

ಶೇ. ವಿದ್ಯಾರ್ಥಿಯು ವರದಕ್ಷಿಣೆಯ ಸಮಸ್ಯೆಯನ್ನು ಅನುಭವಿಸಿದ್ದಾರೆ. 5 ಜನ (55.55) ವಿದ್ಯಾರ್ಥಿಯು ವರದಕ್ಷಿಣೆಯ ಸಮಸ್ಯೆಯನ್ನು ಅನುಭವಿಸಿಲ್ಲ ಅಂದರೆ ಈಕೋಷ್ಠಕದಿಂದ ತಿಳಿಯುವ ವಿಷಯವೇನೆಂದರೆ ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರಲ್ಲಿ ಸ್ವಲ್ಪ ವರದಕ್ಷಿಣೆಯ ಬಗ್ಗೆ ತಿಳುವಳಿಕೆ ಅಲ್ಲದೆ ಕಾನೂನಿನ ಕ್ರಮದ ಬಗ್ಗೆ ತಿಳುವಳಿಕೆಯು ಇರುವುದು ಕಂಡುಬರುವುದು ಅಲ್ಲದೆ ಇನ್ನೊಂದು ಘೋರ ಅಪರಾಧ ಇದನ್ನು ಕೊಡುವುದು ಮತ್ತು ತೆಗೆದುಕೊಳ್ಳುವುದು ಅಪರಾಧವಾಗಿದೆ ಎಂದು ತಿಳಿಸಿದ್ದಾರೆ.

ಅಲ್ಲದೆ ನಮ್ಮ ಸಂಶೋಧನೆಯಲ್ಲಿ ವಿವಾಹ ವಿಚ್ಛೇಧ- ವಿವಾಹ ಪರಿಚ್ಛೇದ, (ಗಂಡನಿಂದ) ಅತ್ತೆ-ಮಾವರಿಂದ ಹಿಂಸೆ, ಮುಂತಾದ ಯಾವುದೇ ಸಮಸ್ಯೆಯನ್ನು ಅನುಭವಿಸಿಲ್ಲ ಎಂದು ನಮ್ಮ ಸಂಶೋಧನೆಯಲ್ಲಿ ಕಂಡುಬಂದಿದ್ದೆ. ಆದರ ಇಂದು ಉನ್ನತ ಶಿಕ್ಷಣಕ್ಕೆ ಕಾಲಿಟ್ಟ ಮಹಿಳೆಯರಿಗೆ ಕಾನೂನಿನ ಅರಿವಿದೆ. ಅಲ್ಲದೆ ತಿಳುವಳಿಕೆಯಿದೆ. ಇದರಿಂದ ಈ ರೀತಿಯ ದಾಂಪತ್ಯ ವಿರಸ, ಮುಂತಾದ ಯಾವುದೇ ರೀತಿಯ ಸಮಸ್ಯೆಯನ್ನು ಕಂಡುಕೊಳ್ಳುವುದು ಸಹಜವಾಗಿದೆ.

ಅಡಿಟಿಪ್ಪಣಿಗಳು

---

1. Mathur. Y.B. Women's Education in India', P-30-41

2. ಚ.ನ. ಶಂಕರರಾವ್, 'ಭಾರತೀಯ ಸಮಾಜಶಾಸ್ತ್ರಅಧ್ಯಯನ', ಪುಟ-196-197

3 ಚ.ನ. ಶಂಕರರಾವ್, 'ಭಾರತೀಯ ಸಮಾಜಶಾಸ್ತ್ರ ಅಧ್ಯಯನ', ಪುಟ-192.

4. ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ಬದಲಾವಣೆ. ಪುಟ-154.

5. ಸ್ಪರ್ಧಾಸ್ಫೂರ್ತಿ, ಪುಟ-51

# ಅಧ್ಯಾಯ-5

# ಉಪಸಂಹಾರ

5.1 ಅಧ್ಯಯನದ ಫಲಿತಗಳು

5.2 ಸಮಸ್ಯೆಯಿಂದ ಹೊರಬರಲು ಸಲಹೆಗಳು

5.3 ಮುಂದಿನ ಅಧ್ಯಯನಕ್ಕೆ ಸಾಧ್ಯತೆಗಳು

# ಅಧ್ಯಾಯ - 5

## ಉಪಸಂಹಾರ

ಭಾರತೀಯ ಸಮಾಜದಲ್ಲಿ ಜಾತಿ ಪದ್ಧತಿಯು ಪ್ರಮುಖವಾಗಿದ್ದು, ಸಾಮಾಜಿಕ ರಚನೆಯಲ್ಲಿ ಜಾತಿ ವ್ಯವಸ್ಥೆಯು ಸ್ತರವಿನ್ಯಾಸದ ಪ್ರಮುಖ ರೂಪವಾಗಿದ್ದು, ಇದು ಏಣಿ-ಶ್ರೇಣಿಯಿಂದ ಕೂಡಿದ್ದು, ಶ್ರೇಣಿ ವ್ಯವಸ್ಥೆಯ ತುತ್ತತುದಿಯಲ್ಲಿ ಬ್ರಾಹ್ಮಣರಿದ್ದರೆ, ಕೆಳಮಟ್ಟದಲ್ಲಿ ಶೂದ್ರರಿದ್ದಾರೆ. ಜಾತಿ ವ್ಯವಸ್ಥೆಯಲ್ಲಿ ಮೇಲು-ಕೀಳೆಂಬ ಭಾವನೆಯಿದ್ದುದರಿಂದ ಇವರನ್ನು ಅತ್ಯಂತ ನಿಕೃಷ್ಟವಾದ ರೀತಿಯಲ್ಲಿ ಕಾಣಲಾಗುತ್ತಿತ್ತು. ಅಲ್ಲದೆ ಇವರು ಅನೇಕ ದೌರ್ಬಲ್ಯಗಳಿಗೆ ಒಳಗಾಗಿದ್ದರು.

ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಹಿಂದಿನಿಂದಲೂ ಯಾವುದೇ ಉನ್ನತ ಸ್ಥಾನಮಾನವನ್ನು ನೀಡಿರಲಿಲ್ಲ. ಅದರಲ್ಲೂ ಸ್ತ್ರೀಯರ ಸ್ಥಿತಿ ಚಿಂತಾಜನಕವಾಗಿದ್ದೀತು. ಇವರಿಗೆ ಶೈಕ್ಷಣಿಕ ಅವಕಾಶ ನೀಡುತ್ತಿರಲಿಲ್ಲ. ಇವರು ಎಲ್ಲಾ ಕ್ಷೇತ್ರಗಳಲ್ಲಿಯೂ ಅಭಿವೃದ್ಧಿಯಾಗಬೇಕಾದರೆ ಶಿಕ್ಷಣದ ಅವಶ್ಯಕತೆಯಿದೆ. ಇವರ ಏಳಿಗೆಗೆ ಶಿಕ್ಷಣವೊಂದೇ ಮೂಲ ಅಸ್ತ್ರವಾಗಿದೆ.

ಪ್ರಸ್ತುತ ಅಧ್ಯಯನ ಪರಿಶಿಷ್ಟಜಾತಿ ವಿದ್ಯಾರ್ಥಿನಿಯರ ಉನ್ನತ ಶಿಕ್ಷಣದ ಬಗ್ಗೆ ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ಉದ್ದೇಶ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಾಮಾಜಿಕ ಹಿನ್ನೆಲೆ, ಶೈಕ್ಷಣಿಕ ಸಮಸ್ಯೆ ಹಾಗೂ ಇವರ ಶೈಕ್ಷಣಿಕ ಅನುಭವ, ಅಭಿಪ್ರಾಯ ಮತ್ತು ಅಭಿವೃದ್ಧಿಯಬಗ್ಗೆ ಅಧ್ಯಯನವಾಗಿದೆ. ಈ ಅಧ್ಯಯನಕ್ಕೆ ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿ ಸ್ನಾತಕೋತ್ತರ ಕಲೆ, ವಿಜ್ಞಾನ, ವಿಭಾಗಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿನಿಯರನ್ನೊಳಗೊಂಡಿದೆ. ಈ ಅಧ್ಯಯನಕ್ಕೆ ಪೂರ್ವಭಾವಿಯಾಗಿ ಮಾದರಿ ವಿಧಾನದ ಆಧಾರದ ಮೇಲೆ ಸಂದರ್ಶನ ಅವಲೋಕನ ಮಾಧ್ಯಮಿಕ ಮಾಹಿತಿ ಸಂಗ್ರಹಣೆಯ ವಿಧಾನಗಳಿಂದ ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನ ಮಾಡಲಾಗಿದೆ.

ಪರಿಶಿಷ್ಟ ಜಾತಿ ಏಳಿಗೆಗಾಗಿ ಜಾತಿ ಪದ್ಧತಿಯ ವಿರುದ್ಧ ಚಳುವಳಿಯನ್ನು ಸುಸಂಘಟಿತ ರೀತಿಯಲ್ಲಿ ಪ್ರಾರಂಭಿಸಿದವರೆಂದರೆ ಜ್ಯೋತಿಬಾಪುಲೆ, ಅಂಬೇಡ್ಕರ್ ಮತ್ತು ಗಾಂಧೀಜಿಯವರು ಇವರು ಶೈಕ್ಷಣಿಕವಾಗಿ ಶೋಷಣೆಗೊಳಗಾದ ಪರಿಶಿಷ್ಟ ಜಾತಿ ಮತ್ತು ಪಂಗಡದವರ ಸಮಸ್ಯೆಯನ್ನು

ಹೋಗಲಾಡಿಸಿ ಸರ್ವರಿಗೂ ಸಮಾನತೆ ಇರಬೇಕೆಂದಿದ್ದಾರೆ. 1920ರಲ್ಲಿ ಅಂಬೇಡ್ಕರ್‌ರವರು ಮೂಕನಾಯಕ ಎಂಬ ಪತ್ರಿಕೆಯಲ್ಲಿ ಹಿಂದೂ ಸಮಾಜದ ದೋಷ ದೌರ್ಬಲ್ಯಗಳನ್ನು ಬಯಲಿಗೆಳೆದರು. 1942ರಲ್ಲಿ ಅಖಿಲ ಭಾರತೀಯ ಪರಿಶಿಷ್ಟ ವರ್ಗಗಳ ಫೆಡರೇಷನ್ ಸ್ಥಾಪಿಸಿ ಆ ಮೂಲಕ ಅಸ್ಪೃಶ್ಯರ ಸಮಸ್ಯೆಗಳನ್ನು ನಿವಾರಿಸುವಲ್ಲಿ ಮಾರ್ಗದರ್ಶನವಾಯಿತು. ಮಹಿಳೆಯರನ್ನು ಪುರುಷನ ಸ್ಥಾನದಲ್ಲಿ ಪ್ರತಿಷ್ಠಾಪಿಸುವ ಮೂಲಕ ಸ್ತ್ರೀ ಸಮಾನತೆಯನ್ನು ಕುರಿತು ಮಹಿಳೆಯರ ವ್ಯಕ್ತಿ ಸ್ವಾತಂತ್ರ್ಯ ಶಿಕ್ಷಣ ಮತ್ತು ಆತ್ಮ ಗೌರವಗಳಂಥ ವಿಷಯಗಳ ಬಗ್ಗೆ ಹೆಚ್ಚು ಒತ್ತು ನೀಡಿದರು.

ಮೊದಲೇ ತಿಳಿಸಿದಂತೆ ಮಹಿಳೆಯರ ಶಿಕ್ಷಣಕ್ಕೆ ಬ್ರಿಟಿಷ್ ಆಡಳಿತದಿಂತೀಚೆಗೆ ಹೆಚ್ಚು ಪ್ರೋತ್ಸಾಹ ನೀಡಲಾಯಿತು. ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಶಿಕ್ಷಣವನ್ನು ಇತರೆ ಜಾತಿಯವರ ಜೊತೆಯಲ್ಲಿಯೇ ಕೊಡಬೇಕು ಎಂಬ ದೃಷ್ಟಿಯಲ್ಲಿ ಈ ಜಾತಿಯ ಜನರಿಗೆ ಹೆಚ್ಚು ಪ್ರೋತ್ಸಾಹವನ್ನು ನೀಡಲಾಯಿತು. ಭಾರತ ಸ್ವಾತಂತ್ರ್ಯನಂತರ ಸಂವಿಧಾನದ ಮೂಲಕ ಪರಿಶಿಷ್ಟ ಜಾತಿ ಹಲವಾರು ಸೌಲಭ್ಯಗಳನ್ನು ನೀಡಿತು.

ಸ್ತ್ರೀಶಿಕ್ಷಣಕ್ಕಾಗಿ ಭಕ್ತಿ ಆಂದೋಲನಾಕಾರರು, ಸಮಾಜ ಸುಧಾರಕರು ಸ್ತ್ರೀಯರ ಶಿಕ್ಷಣದ ಮೇಲೆ ವಿಧಿಸಿದ ಕಟ್ಟುಪಾಡುಗಳನ್ನು ಸಡಿಲಿಸಿ ಶೈಕ್ಷಣಿಕ ಅವಕಾಶಗಳನ್ನು ಹೆಚ್ಚಿಸಿದರು. ಬ್ರಿಟಿಷರು ಜಾರಿಗೆ ತಂದ ಸಾರ್ವಜನಿಕ ಶಿಕ್ಷಣ ನೀತಿಯಿಂದಾಗಿ, ಭಾರತ ಸ್ವಾತಂತ್ರ್ಯ ನಂತರ ಸ್ತ್ರೀಯರಿಗೆ ಶೈಕ್ಷಣಿಕ ಅವಕಾಶ ಹೆಚ್ಚಾಯಿತು.

ಮೊದಲನೇ ಅಧ್ಯಾಯದಲ್ಲಿ ಪರಿಶಿಷ್ಟಜಾತಿ ವಿದ್ಯಾರ್ಥಿನಿಯರ ಉನ್ನತ ಶಿಕ್ಷಣದ ಬಗ್ಗೆ ಅಧ್ಯಯನ ಮಾಡುವಾಗ ಭಾರತದ ಸ್ತ್ರೀಯರ ಸ್ಥಾನಮಾನದ ಬಗೆಗೆ ಅಧ್ಯಯನ ಮಾಡಲಾಗಿದೆ. ಪ್ರಾಚೀಲ ಕಾಲದಲ್ಲಿ ಮಹಿಳೆಗೆ ಉನ್ನತ ಸ್ಥಾನವಿತ್ತು. ಅಂದಿನ ದಿನಗಳಲ್ಲಿ ಪುರುಷನ ಸರಿಸಮಾನವಾಗಿ ಶಿಕ್ಷಣ ಪಡೆಯುತ್ತಿದ್ದರು. ಆದರೆ ಕೀಳುಜಾತಿಯ ಸ್ತ್ರೀಯರಿಗೆ ಈ ಅವಕಾಶವಿರಲಿಲ್ಲ.

ಮಧ್ಯಕಾಲೀನ ಭಾರತದಲ್ಲಿ ಜಾತಿ ಸಮಸ್ಯೆಯು ಹೆಚ್ಚಾಗಿದ್ದು, ಈ ಕಾಲದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರು ಎಲ್ಲಾ ಕ್ಷೇತ್ರದಲ್ಲಿಯೂ ಶೋಷಣೆಗೆ ಒಳಗಾಗಿದ್ದು ಪ್ರಾಚೀನ ಕಾಲದ ಸ್ತ್ರೀಯರ ಸ್ಥಾನಮಾನಕ್ಕಿಂತ ಮಧ್ಯಕಾಲೀನ ಸ್ತ್ರೀಯರ ಸ್ಥಾನಮಾನದಲ್ಲಿ ಅನೇಕ ಬದಲಾವಣೆಗಳಾದವು.

ಈ ಕಾಲದಲ್ಲಿ ಬಾಲ್ಯ ವಿವಾಹ, ಸತೀಪದ್ಧತಿ, ಪರದಾಪದ್ಧತಿ, ದೇವದಾಸಿಪದ್ಧತಿ, ವಿಧವಾ ಪುನರ್‌ವಿವಾಹ ನಿಷೇಧ ಮೊದಲಾದ ಸಾಮಾಜಿಕ ಪಿಡುಗುಗಳು ಕಂಡುಬಂದವು.

ಸ್ತ್ರೀಯರ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಶೈಕ್ಷಣಿಕ ಜೀವನಕ್ಕೆ ಹೊಸ ಚಾಲನೆಯನ್ನು ನೀಡಿದ್ದು ಭಕ್ತಿ ಆಂದೋಲನಕಾರರು ಮತ್ತು ಸಮಾಜ ಸುಧಾರಕರು ಬ್ರಿಟೀಷರ ಹೊಸ ವಿಚಾರಧಾರೆಯಿಂದ ಪ್ರಭಾವಿತರಾದ ರಾಜರಾಮ್ ಮೋಹನ್‌ರಾಯ್, ದಯಾನಂದ ಸರಸ್ವತಿ, ಸ್ವಾಮಿ ವಿವೇಕಾನಂದ, ಮಹರ್ಷಿ ಕರ್ವೆ, ಈಶ್ವರ ಚಂದ್ರವಿದ್ಯಾಸಾಗರ್ ಮತ್ತು ದೇವಂದ್ರನಾಥ್ ಠಾಗೋರ್ ಮೊದಲಾದವರು ಅಸ್ಪೃಶ್ಯತೆಯನ್ನು ಹೊಡೆದು ಹಾಕುವುದು ಮತ್ತು ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಆದ್ಯತೆಯನ್ನು ನೀಡಿದರು. ಬ್ರಿಟೀಷರ ಕಾಲದಲ್ಲಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿ ಶೈಕ್ಷಣಿಕ ದೌರ್ಬಲ್ಯವು ಅತಿ ಮಹತ್ವದ ದೌರ್ಬಲ್ಯವಾಗಿದ್ದು ಮಹಿಳೆಯರಿಗೆ ಶಿಕ್ಷಣವು ಅಗತ್ಯ ಎಂಬುದಾಗಿ ಗಣನೆಗೆ ತೆಗೆದುಕೊಂಡು ವ್ಯವಸ್ಥಿತವಾದ ಶಿಕ್ಷಣವನ್ನು ಜಾರಿಗೆ ತಂದರು. ಲಾರ್ಡ್ ಮೆಕಾಲೆ ಜಾರಿಗೆ ತಂದ ಸಾರ್ವಜನಿಕ ಶಿಕ್ಷಣ ನೀತಿ ಇಡೀ ದೇಶದ ಜನ ಜಾಗೃತಿಯ ಇತಿಹಾಸದಲ್ಲಿ ವಿಶೇಷವಾಗಿ ನಾಡಿನ ಶೂದ್ರಾತಿ-ಶೂದ್ರರು ಶಿಕ್ಷಣ ಪಡೆಯುವಂತಾಗಿ ಮೆಕಾಲೆ ಶಿಕ್ಷಣ ನೀತಿ ಒಂದು ಮೈಲುಗಲ್ಲಾಗಿದೆ.

ಎರಡನೇ ಅಧ್ಯಾಯದಲ್ಲಿ ಮಹಿಳಾ ಶಿಕ್ಷಣ ನಡೆದು ಬಂದ ದಾರಿ ಎಂಬ ಅಧ್ಯಯನದಲ್ಲಿ ಪ್ರಾಚೀನಕಾಲದಲ್ಲಿ ಅಂದರೆ ರಾಮಾಯಣ-ಮಹಾಭಾರತ ಕಾಲದಲ್ಲಿ ಸ್ತ್ರೀಯರ ಶಿಕ್ಷಣದ ಸ್ಥಿತಿಗತಿಗಳನ್ನು ವಿಜಯನಗರದ ಕಾಲದಲ್ಲಿ ಶೈಕ್ಷಣಿಕ ಸಂಸ್ಥೆ ಬೌದ್ಧ-ಜೈನಾರ ಕಾಲದಲ್ಲಿ ಶೈಕ್ಷಣಿಕ ವ್ಯವಸ್ಥೆಯನ್ನು ಮೌರ್ಯರ ಕಾಲದಲ್ಲಿ ಸ್ತ್ರೀಯರ ಶಿಕ್ಷಣದ ಸ್ಥಿತಿಗಳನ್ನು ಚರ್ಚಿಸಲಾಗಿದೆ. ಮಧ್ಯ ಯುಗದಲ್ಲಿ ಅಂದರೆ ಮುಸ್ಲಿಂರ ಕಾಲದಲ್ಲಿ ಶಿಕ್ಷಣದ ಸ್ಥಿತಿಗಳನ್ನು ಚರ್ಚಿಸಲಾಗಿದೆ. ಅಲ್ಲದೆ ಬ್ರಿಟಿಷರ ಕಾಲದಲ್ಲಿ ಪರಿಶಿಷ್ಟ ಜಾತಿಯ ಮಹಿಳೆಯರಿಗೆ ಶೈಕ್ಷಣಿಕ ಶಿಲೆಯನ್ನು ತೆರೆಯಲಾದ ಶಿಕ್ಷಣ ಸಂಸ್ಥೆ ಬಗ್ಗೆ ಮತ್ತು ಸಾಮಾಜಿಕ ಸುಧಾರಕರ ಪಾತ್ರವನ್ನು ಚರ್ಚಿಸಲಾಗಿದೆ. ಅಲ್ಲದೆ ಸ್ವಾತಂತ್ರ್ಯ ಭಾರತದಲ್ಲಿ ಪರಿಶಿಷ್ಟಜಾತಿಯ ಮಹಿಳೆಯರಿಗೆ ವಿದ್ಯಾರ್ಥಿಯರಿಗೆ ಇರುವಂತಹ ಸೌಲಭ್ಯ ಶಾಲೆಗಳು ಮುಂತಾದವುಗಳ ಬಗ್ಗೆ ಚರ್ಚಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಪರಿಶಿಷ್ಟ ಜಾತಿಯ ಮಹಿಳಾ ವಿದ್ಯಾರ್ಥಿನಿಯರ ಶೈಕ್ಷಣಿಕ ಸಮಸ್ಯೆಗಳು ಮತ್ತು ಸಾಮಾಜಿಕ ಸಮಸ್ಯೆಯನ್ನು ಕುರಿತು ಅಂಕಿ-ಅಂಶಗಳ ಮೂಲಕ ವಿವರಣೆಯನ್ನು ನೀಡಲಾಗಿದೆ.

ಶಿಕ್ಷಣದ ಸಂಘಟನೆಯ ಕಾರ್ಯ 1813ರ ಚಾರ್ಟರ್ ಆಕ್ಟ್ ಎಂಬ ಕಾಯ್ದೆ ಜಾರಿಗೆ ಬಂದ ನಂತರ ಮುಂದುವರೆಯಿತು. 1854ರಲ್ಲಿ ವುಡ್ಸ್ ಡಿಸ್ ಪ್ಯಾಚ್‌ನ ಶಿಫಾರಸ್ಸುಗಳಿಂದ ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿತು. 1854ರಿಂದ 1882ರವರೆಗೆ ಮಹಿಳಾ ಶಿಕ್ಷಣವು ವಿಸ್ತರಣೆಗೊಂಡಿತು. 19ನೇ ಶತಮಾನದ ಮಧ್ಯಭಾಗದಲ್ಲಿ ಸ್ತ್ರೀಯರ ಅಭಿವೃದ್ಧಿಗೆ ಹೆಚ್ಚು ಮಹತ್ವ ನೀಡಲಾಯಿತು. 1916ರಲ್ಲಿ ಭಾರತೀಯ ಮಹಿಳಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಲಾಯಿತು. ಸ್ವತಂತ್ರ್ಯನಂತರ ಮಹಿಳೆ ಶಿಕ್ಷಣವು ಸಾಕಷ್ಟು ಪ್ರಗತಿ ಸಾಧಿಸಿತು. 1976ರ ವೇಳೆಗೆ ಶಿಕ್ಷಣ ಪಡೆಯುವಲ್ಲಿ ಯಶಸ್ವಿಯಾದರು. ಸ್ವಾತಂತ್ರ್ಯ ನಂತರ ಸಂವಿಧಾನದ ಮೂಲಕ ಹಲವಾರು ಸೌಲಭ್ಯಗಳನ್ನು ನೀಡಿತು. ಇದರಿಂದ ಶಿಕ್ಷಣ ಪಡೆಯುವವರ ಸಂಖ್ಯೆ ಹೆಚ್ಚಾಯಿತು.

ಸ್ತ್ರೀಯರು ಶಿಕ್ಷಣ ಪಡೆಯುವಲ್ಲಿ ಕಂಡುಬರುತ್ತಿದ್ದಂತಹ ಸಮಸ್ಯೆಗಳೆಂದರೆ ಸಾಮಾಜಿಕ ರಚನೆ, ಆರ್ಥಿಕ ಪರಿಸ್ಥಿತಿ, ಸಹ ಶಿಕ್ಷಣ/ ಶೈಕ್ಷಣಿಕ ವ್ಯವಸ್ಥೆ ಪುರಾತನ ಕಾಲದಲ್ಲಿ ಶೈಕ್ಷಣಿಕ ಜ್ಞಾನದಿಂದ ವಂಚಿತರಾದ ಸ್ತ್ರೀಯರು ತನಗಾಗುವ ಅನ್ಯಾಯವನ್ನು ಪ್ರತಿಭಟಿಸುತ್ತಿರಲಿಲ್ಲ.

ಪರಿಶಿಷ್ಟ ಜಾತಿ ಉನ್ನತ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿನಿಯರ ಶೈಕ್ಷಣಿಕ ಸಮಸ್ಯೆಗಳನ್ನು ಅಧ್ಯಯನ ಮಾಡುವಾಗ ಅನೇಕ ಸಮಸ್ಯೆಗಳು ಕಂಡು ಬಂದು ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಭಾಷಾ ಸಮಸ್ಯೆ, ಗ್ರಂಥಾಲಯದ ಸಮಸ್ಯೆ, ಆರ್ಥಿಕ ಸಮಸ್ಯೆ ಮತ್ತು ಇತರ ಸಮಸ್ಯೆಗಳು ಕಂಡುಬಂದವು.

ಶೇಕಡ 38.33ರಷ್ಟು ವಿದ್ಯಾರ್ಥಿನಿಯರಿಗೆ ಭಾಷಾ ಸಮಸ್ಯೆ. ಶೇಕಡ 25ರಷ್ಟು ವಿದ್ಯಾರ್ಥಿನಿಯರಿಗೆ ಗ್ರಂಥಾಲಯದ ಸಮಸ್ಯೆ ಶೇಕಡ 13.33ರಷ್ಟು ವಿದ್ಯಾರ್ಥಿನಿಯರಿಗೆ ಇತರೇ ಸಮಸ್ಯೆಗಳಿದ್ದವು. ಹೆಚ್ಚಿನ ವಿದ್ಯಾರ್ಥಿನಿಯರಿಗೆ ಭಾಷಾ ಸಮಸ್ಯೆ ಕಂಡು ಬಂದಿತು. ಭಾಷಾ ಸ ಮಸ್ಯೆಗೆ ಶೈಕ್ಷಣಿಕ ಮಾಧ್ಯಮವೇ ಕಾರಣವಿರಬಹುದು. ಗ್ರಾಮಾಂತರ ಪ್ರದೇಶದಲ್ಲಿ ಕನ್ನಡ ಮಾಧ್ಯಮವೇ ಹೆಚ್ಚಿನದಾಗಿದ್ದು ಉನ್ನತ ಶಿಕ್ಷಣದಲ್ಲಿ ಇಂಗ್ಲೀಷ್ ಮಾಧ್ಯಮವೇ ಪ್ರಮುಖವಾಗಿರುತ್ತದೆ. ಸಂದರ್ಶಿಸಿದ ಗ್ರಾಮಾಂತರ ವಿದ್ಯಾರ್ಥಿನಿಯರಿಗೆ ಭಾಷಾ ಸಮಸ್ಯೆಯು ಹೆಚ್ಚಿನದಾಗಿ ಕಂಡುಬಂದಿತು.

ಉನ್ನತ ಶಿಕ್ಷಣವನ್ನು ಹಲವಾರು ಕಾರಣಗಳಿಂದ ಪಡೆಯುತ್ತಿದ್ದಾರೆ. ಶೇ. 46.66ರಷ್ಟು ವಿದ್ಯಾರ್ಥಿನಿಯರು ಉದ್ಯೋಗಕ್ಕಾಗಿಯೂ ಶೇ. 15ರಷ್ಟು ಉನ್ನತ ಸ್ಥಾನಮಾನಕ್ಕಾಗಿ ಶೇಕಡ 8.33ರಷ್ಟು ವಿವಾಹಕ್ಕಾಗಿಯೂ ಶೇ. 12ರಷ್ಟು ವಿದ್ಯಾರ್ಥಿನಿಯರು ಆರ್ಥಿಕ ಸ್ವಾವಲಂಬನೆಗಾಗಿಯೂ ಶೇ. 6ರಷ್ಟು ಇತರ ಕಾರಣಗಳಿಂದಲೂ ಉನ್ನತ ಶಿಕ್ಷಣವನ್ನು ಪಡೆಯುತ್ತಿದಾದರೆ. ಇದರಿಂದ ತಿಳಿದು ಬರುವ ಪ್ರಮುಖ ಅಂಶವೆಂದರೆ ಹೆಚ್ಚಿನ ವಿದ್ಯಾರ್ಥಿನಿಯರು ಉದ್ಯೋಗ / ಆರ್ಥಿಕ ಸ್ವಾವಲಂಬನೆಗಾಗಿ ಉನ್ನತಶಿಕ್ಷಣವನ್ನು ಪಡೆಯುತ್ತಿದ್ದಾರೆ.

ಉನ್ನತ ಶಿಕ್ಷಣ ಪಡೆದ ನಂತರ ಶೇ. 33.33ರಷ್ಟು ವಿದ್ಯಾರ್ಥಿನಿಯರು ಉಪನ್ಯಾಸಕ ವೃತ್ತಿಯನ್ನು ಶೇ. 11.66 ಆಡಳಿತಗಾರರು ಶೇ. 55ರಷ್ಟು ವಿದ್ಯಾರ್ಥಿನಿಯು ಉನ್ನತ ಶಿಕ್ಷಣ ಪಡೆದು ಇತರೆ ಯಾವುದೇ ಸರ್ಕಾರಿ ಹುದ್ದೆಯನ್ನು ಸೇರಲು ಇಚ್ಛಿಪಡುತ್ತಾರೆ. ಕಾರಣವೆಂದಸೆ ಭದ್ರತೆಯ ದೃಷ್ಟಿಯಿಂದ ಉದ್ಯೋಗವನ್ನು ಪಡೆಯುವಲ್ಲಿ ಶಿಕ್ಷಣವು ಪ್ರಮುಖವಾದದ್ದು.

ಹೀಗೆ ಈ ಅಧ್ಯಯನದಲ್ಲಿ ಶೈಕ್ಷಣಿಕ ಮತ್ತು ಸಾಮಾಜಿಕ ಸಮಸ್ಯೆಗಳ ಬಗ್ಗೆ ಚರ್ಚಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಆರ್ಥಿಕ ಮತ್ತು ವೈವಾಹಿಕ ಸಮಸ್ಯೆಗಳನ್ನು ಚರ್ಚಿಸಲಾಗಿದೆ. ಈ ಪ್ರಸ್ತುತ ಅಧ್ಯಯನದಲ್ಲಿ ಪ್ರಥಮವಾಗಿ ಆರ್ಥಿಕ ಸಮಸ್ಯೆಯನ್ನು ವಿಶ್ಲೇಷಿಸಲಾಗಿದೆ. ಮೊದಲಿಗೆ ಪರಿಶಿಷ್ಟಜಾತಿಯ ಆರ್ಥಿಕ ಪರಿಸ್ಥಿತಿಯು ಯಾವ ರೀತಿಯ ಪ್ರಾಚೀನ ಕಾಲದಲ್ಲಿ ಇದ್ದಿತ್ತೆಂದು ವಿಶ್ಲೇಷಣೆ ಮಾಡಲಾಗಿದೆ. ಇದಕ್ಕೆ ಆಧಾರವನ್ನು ಕೊಡುವಂತೆ ಅಂದರೆ ನಾವು ವಿದ್ಯಾರ್ಥಿಯು ಆರ್ಥಿಕ ಸಮಸ್ಯೆಯನ್ನು ತಿಳಿದುಕೊಳ್ಳುವುದಕ್ಕಿಂತ ಮುಂಚೆ ಇವರ ಕೌಟುಂಬಿಕ ಹಿನ್ನಲೆಯಲ್ಲಿ ವಿಶ್ಲೇಷಿಸಿದ್ದೇವೆ. ಅವುಗಳಲ್ಲಿ ಪ್ರಮುಖವಾದ ವಿವರಗಳೆಂದರೆ

ಸಂದರ್ಶಿಸಿದ 60 ಜನ ವಿದ್ಯಾರ್ಥಿನಿಯರಲ್ಲಿ ಶೇ. 3 ರಿಂದ 5 ಸದಸ್ಯರಿರುವ ಕುಟುಂಬವು ಶೇಕಡ 70ರಷರ್ಷು 6 ರಿಂದ 8 ರಷ್ಟು ಸದಸ್ಯರು ಯುವ ಕುಟುಂಬವು ಶೇ. 25ರಷ್ಟು 9 ಕ್ಕಿಂತ ಹೆಚ್ಚು ಸದಸ್ಯರಿರುವ ಕುಟುಂಬವು ಶೇ. 5ರಷ್ಟು ಇರುವ ಕುಟುಂಬವು ಕಂಡುಬಂದಿದೆ.

ಪೋಷಕ ವೃತ್ತಿ ಮಕ್ಕಳ ವಿದ್ಯಾಭ್ಯಾಸದ ಸಾಧನೆಗೆ ಅತ್ಯಂತ ಪ್ರಮುಖವಾದುದು. ಪ್ರತಿವಾದಿಗಳ ಪೋಷಕರಲ್ಲಿ ಶೇ. 41.66ರಷ್ಟು ವ್ಯವಸಾಯಗಾರರು ಶೇ. 16.66ರಷ್ಟು ವ್ಯಾಪಾರಸ್ಥರು ಶೇ. 20ರಷ್ಟು

ಗುಮಾಸ್ತರು. ಶೇಕಡ. 33.3ರಷ್ಟು ಗಜೆಟೆಡ್ ಅಧಿಕಾರಿಗಳು ಶೇ. 18.33ರಷ್ಟು ಇತರೆ ವೃತ್ತಿಗಳು ಅವಲಂಭಿಸಿದ್ದಾರೆ ಎಂದು ತಿಳಿದುಬಂದಿದೆ. ತಾಯಿಯವರ ಉದ್ಯೋಗಕ್ಕೆ ಸಂಬಂಧಿಸಿದಂತೆ ಶೇ. 75ರಷ್ಟು ತಾಯಂದಿರು, ಗೃಹಿಣಿಯರು ಶೇಕಢ 6.66ರಷ್ಟು ಅಧ್ಯಾಪಕಿಯರು ಶೇಕಡ 18.33ರಷ್ಟು ಇತರೆ ಉದ್ಯೋಗದಲ್ಲಿದ್ದಾರೆ. ಹೆಚ್ಚಿನ ಪ್ರತಿವಾದಿಗಳು ತಾಯಂದಿರು ಗೃಹಿಣಿಯರಾಗಿದ್ದಾರೆ. ಇವರು ಹೆಚ್ಚಾಗಿ ವಿದ್ಯಾವಂತರಲ್ಲದಿದ್ದರೂ ಉನ್ನತ ಉದ್ಯೋಗದಲ್ಲಿದ್ದರೂ ಮಕ್ಕಳಿಗೆ ಶಿಕ್ಷಣವನ್ನು ನೀಡುವ ನಾಗರೀಕತೆಯಿದೆ. ತಮ್ಮ ಹೆಣ್ಣುಮಕ್ಕಳಿಗೆ ಈ ಸೌಲಭ್ಯವನ್ನು ಕೊಡಬೇಕೆಂಬ ತಿಳುವಳಿಕೆಯಿದೆ.

ಈ ಜಾತಿಯ ಜನಾಂಗ ಹಿಂದೆ ಅನೇಕ ಸಮಸ್ಯೆಗಳಿದ್ದವು. ಅವುಗಳನ್ನು ಪ್ರತಿಭಟಿಸುವ ಶಕ್ತಿಯಿರಲಿಲ್ಲ. ಏಕೆಂದರೆ ಇವರು ಶಿಕ್ಷಣ ಜ್ಞಾನದಿಂದ ವಂಚಿತರಾಗಿದ್ದರು. ಆದರೆ ತಾಯಿ ಆ ಸಮಸ್ಯೆಗಳನ್ನೆದುರಿಸುವ ಶಕ್ತಿಯನ್ನು ಪಡೆದುಕೊಂಡಿದ್ದಾರೆ. ಜಾತಿ ಸಮಸ್ಯೆಗಳು ಸ್ನೇಹಿತರ ಸಮೂಹದಲ್ಲಿ ಶೈಕ್ಷಣಿಕ ಸಮಯದಲ್ಲಿ ಕಂಡುಬರುವುದಿಲ್ಲ. ಶಿಕ್ಷಣದಿಂದ ಹಲವಾರು ರೀತಿಯಲ್ಲಿ ಬದಲಾವಣೆ ಸಾಧ್ಯತೆ.

ಇದೇ ಅಧ್ಯಯನದಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಾಮಾಜಿಕ ಸಮಸ್ಯೆಗಳನ್ನು ಕುರಿತು ಚರ್ಚಿಸಲಾಗಿದೆ. ನಮ್ಮ ಅಧ್ಯಯನದಲ್ಲಿ ಶೇ. 35.00ಕ್ಕೂ ವಿದ್ಯಾರ್ಥಿಯು ಬಾಲ್ಯ ಶಿಕ್ಷಣದಿಂದ ಪ್ರಸ್ತುತ ಶಿಕ್ಷಣದವರೆಗೂ ಜಾತಿಬೇಧದ ಸಮಸ್ಯೆಯನ್ನು ಅನುಭವಿಸಿಕೊಂಡು ಕಂಡುಬಂದಿದೆ. ಹಾಗೆಯೇ ಕೆಲವು ವಿದ್ಯಾರ್ಥಿಯು ತಮಗೆ ಇದ್ದಂತಹ ಅೀಕ ರೀತಿಯ ಜಾತಿಯ ಸಮಸ್ಯೆಯನ್ನು ಅನುಭವವನ್ನು ತಿಳಿಸಿದ್ದಾರೆ.

ಹಾಗೆಯೇ ಶೇ. 18.33ರಷ್ಟು ವಿದ್ಯಾರ್ಥಿಯು ತಾವು ಬಾಲ್ಯ ಶಿಕ್ಷಣದಿಂದ ಪ್ರಸ್ತುತ ಶಿಕ್ಷಣದವರೆಗೂ ಲಿಂಗ ತಾರತಮ್ಯತೆಯ ಸಮಸ್ಯೆಯನ್ನು ಎದುರಿಸುತ್ತೇವೆ. ಇವರು ಹೆಚ್ಚಾಗಿ ಕುಟುಂಬದಲ್ಲಿಯೇ ಲಿಂಗ ತಾರತಮ್ಯತೆಯನ್ನು ಅನುಭವಿಸಿರುವುದು ಕಂಡುಬಂದಿವೆ.

ಹಾಗೆಯೇ ಶ ೯. 16.66ರಷ್ಟು ವಿದ್ಯಾರ್ಥಿನಿಯರು ತಾವು ಲೈಂಗಿಕ ಕಿರುಕುಳದ ಸಮಸ್ಯೆಯನ್ನು ಎದುರಿಸುವುದು ತಿಳಿದುಬಂದಿದೆ. ಇದು ಕಾಲೇಜಿನ ಉಪನ್ಯಾಸಕರಿಂದಲೇ ಈ ರೀತಿಯ ಸಮಸ್ಯೆಯನ್ನು ಎದುರಿಸಿರುವುದು ಕಂಡುಬಂದಿದೆ.

ನಂತರದಲ್ಲಿ ಶೇ. 38.33 ರಷ್ಟು ವಿದ್ಯಾರ್ಥಿಯು ಶೈಕ್ಷಣಿಕ ಚಳುವಳಿಗಳಲ್ಲಿ ಭಾಗವಹಿಸಿದ್ದಾರೆ. ಇದರಿಂದ ಕಾಲೇಜಿನ ಪಾಠ-ಪ್ರವಚನಗಳಿಗೆ ತೊಂದರೆಯಾಗುತ್ತಿರುವುದು ಕಂಡುಬರುತ್ತಾರೆ. ಅಲ್ಲದೆ ಇವರಲ್ಲಿ ವಿದ್ಯಾರ್ಥಿಯ ಹೋರಾಟಕ್ಕೆ ಪ್ರಮುಖ ಕಾರಣವೆಂದರೆ ಶಿಕ್ಷಕರ ಕೊರತೆಯೇ ಕಾರಣವೆಂದು ಹೇಳಿದ್ದಾರೆ.

ಪೋಷಕರು ಹೊಂದಿರುವ ಆಸ್ತಿಗೆ ಸಂಬಂಧಿಸಿದಂತೆ 1 ರಿಂದ 4 ರಷ್ಟು ಎಕರೆ ಆಸ್ತಿಯನ್ನು ಶೇಕಡ 30ರಷ್ಟು ಸದಸ್ಯರು ಶೇಕಡ 42.05ರಷ್ಟು ಸದಸ್ಯರು 5.9 ಎಕರೆ ಆಸ್ತಿಯನ್ನು 10.14 ಎಕರೆ ಆಸ್ತಿಯನ್ನು ಶೇ. 12.25ರಷ್ಟು ಸದಸ್ಯರು ಶೇ. 7.05ರಷ್ಟು ಸದಸ್ಯರು 15-19 ಎಕರೆ ಆಸ್ತಿಯನ್ನು 20ಕ್ಕಿಂತ ಹೆಚ್ಚು ಎಕರೆ ಆಸ್ತಿಯನ್ನು ಶೇಕಡ 7.5ರಷ್ಟು ಸದಸ್ಯತ್ವ ಹೊಂದಿದವರಾಗಿದ್ದಾರೆ.

ಪೋಷಕರ ವರಮಾನದಿಂದ ಸಾಮಾಜಿಕ ಆರ್ಥಿಕ ಅಂತಸ್ತನ್ನು ನಿರ್ಧರಿಸಬಹುದು. ವರಮಾನಕ್ಕೂ ಶಿಕ್ಷಣಕ್ಕೂ ಸಂಬಂಧವಿದೆ. ಪೋಷಕರ ವರಮಾನದಿಂದ ಮಕ್ಕಳ, ಶೈಕ್ಷಣಿಕ ವಾತಾವರಣ ನಿರ್ಮಾಣ ಮಾಡಬಹುದು. ಕೇವಲ ಹೆಚ್ಚಿನ ಆದಾಯವನ್ನು ಶೇಕಡ 16.66ರಷ್ಟು ಸದಸ್ಯರು ಪಡೆಯುತ್ತಿದ್ದಾರೆ ಎಂದು ತಿಳಿದು ಬಂದಿದೆ. ಅದರಲ್ಲಿ ಹಿಂದಿನಿಂದಲೂ ಆರ್ಥಿಕ ಸ್ಥಿತಿ ಕಡಿಮೆಯಿದ್ದು ಇತ್ತೀಚೆಗೆ ಆಸ್ತಿಯನ್ನು ಪಡೆಯಲು ಸಾಧ್ಯವಾಯಿತು. ನಿಮ್ಮ ಮಕ್ಕಳು ನಿಮ್ಮ ಹಾಗೆ ಕಷ್ಟಪಡಬಾರದೆಂದು ತಮ್ಮ ತಿಳುವಳಿಕೆಯಿಂದ ಮಕ್ಕಳಿಗೆ ಉನ್ನತ ಶಿಕ್ಷಣವನ್ನು ನೀಡಿದರು. ಬಡತನವಿದೆ. ಹಾಗೂ ಆರ್ಥಿಕಮಟ್ಟ ಉತ್ತಮವಾಗಿರುವುದಿಲ್ಲ ಎಂದು ತಿಳಿದುಬರುತ್ತಿದೆ.

ಈ ಅಧ್ಯಯನದಲ್ಲಿ ತಿಳಿದುಬರುವ ಅಂಶವೆಂದರೆ ಸಮಾಜದಲ್ಲಿ ಶಿಕ್ಷಣ, ವೃತ್ತಿ ವರಮಾನದ ಆಧಾರದ ಮೇಲೆ ಸಾಮಾಜಿಕ, ಆರ್ಥಿಕ ಅಂತಸ್ತನ್ನು ನಿರ್ಧರಿಸಬಹುದು. ಮಕ್ಕಳ ಶಿಕ್ಷಣ ಹೆಚ್ಚಿನದಾಗಿ ಪೋಷಕರ ಶಿಕ್ಷಣ ವರಮಾನವನ್ನು ಅವಲಂಬಿಸಿದೆ. ಪೋಷಕರು ಕಡಿಮೆ ಆದಾಯವನ್ನು ಪಡೆದರೇ ಮಕ್ಕಳ ಉನ್ನತ ಶಿಕ್ಷಣದ ಕಡೆ ಗಮನ ಕೊಡುತ್ತಿರುವುದು ಕಂಡುಬಂದಿದೆ. ಆದ್ದರಿಂದ ವರಮಾನಕ್ಕೂ ಶಿಕ್ಷಣಕ್ಕೆ ಸಂಬಂಧವಿಲ್ಲ ಎಂದು ಹೇಳಬಹುದು.

ನಂತರ ನಾವು ಪ್ರಸ್ತುತ ಅಧ್ಯಯನದಲ್ಲಿ ವಿದ್ಯಾರ್ಥಿನಿಯರು ಅನುಭವಿಸುತ್ತಿರುವ ಸಮಸ್ಯೆಗಳಲ್ಲಿ ಶೇ. 41.66ರಷ್ಟು ವಿದ್ಯಾರ್ಥಿಯು ಆರ್ಥಿಕ ಸಮಸ್ಯೆಯನ್ನು ಶೇ. 26.66 ರಷ್ಟು ಸಾಮಾಜಿಕ

ಸಮಸ್ಯೆ 16.66ಕ್ಕೂ ವಿದ್ಯಾರ್ಥಿನಿಯು ಶೈಕ್ಷಣಿಕ ಸಮಸ್ಯೆ.10.00 ರಷ್ಟು ಸಾರಿಗೆ ಸಮಸ್ಯೆ. ಇತರೆ ಸಮಸ್ಯೆ 5.00ರಷ್ಟು ಎದುರಿಸುತ್ತಿರುವುದು ಕಂಡುಬಂದಿದೆ. ಇದರಿಂದ ಬಹುತೇಕ ವಿದ್ಯಾರ್ಥಿನಿಯರು ಆರ್ಥಿಕ ಸಮಸ್ಯೆಯಲ್ಲಿ ತೊಡಗಿರುವುದನ್ನು ನಾವು ನೋಡಬಹುದು.

ಹಾಗೆಯೇ ಶೇ. 41.00ರಷ್ಟು ವಿದ್ಯಾರ್ಥಿನಿಯರು ಈ ಆರ್ಥಿಕ ಸಮಸ್ಯೆಯಿಂದ ಹೊರಬರಲು ತಂದೆ-ತಾಯಿಯರು ಸಹಾಯ ಮಾಡಿದ್ದಾರೆ. ಅಲ್ಲದೆ 24.00 ರಷ್ಟು ವಿದ್ಯಾರ್ಥಿಯ ಅಕ್ಕ-ಅಣ್ಣಂದಿರು ಸಹಾಯವನ್ನು ಪಡೆದುಕೊಂಡು ತಮ್ಮ ಶೈಕ್ಷಣಿಕ ಅಗತ್ಯತೆಯನ್ನು ಪೂರೈಸಿಕೊಂಡಿದ್ದಾರೆ. ಅಂದರೆ ಇಂದು ಎಲ್ಲರೂ ಶಿಕ್ಷಣಕ್ಕೆ ಹೆಚ್ಚಿನ ಅವಕಾಶ ಮತ್ತು ಸಹಕಾರವನ್ನು ನೀಡುತ್ತಾರೆ. ಅಲ್ಲದೆ ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ಶೇ. 8.00ರಲ್ಲಿ ವಿದ್ಯಾರ್ಥಿನಿಯರು ತಮ್ಮ ಶೈಕ್ಷಣಿಕ ಅಗತ್ಯತೆಯನ್ನು ತಾವೇ ಈಡೇರಿಸಿಕೊಳ್ಳುತ್ತಿದ್ದಾರೆ. ಅರೆಕಾಲಿಕ ಉದ್ಯೋಗಗಳನ್ನು ಮಾಡಿಕೊಂಡು ಅಂದರೆ ಇವರಲ್ಲೂ ಸಹ ಸ್ತ್ರೀ ಸಬಲೀಕರಣನ ಪ್ರಭಾವದಿಂದ ಎಂದು ತಿಳಿಯುವುದು.

ಈ ಒಂದು ಅಧ್ಯಯನದಲ್ಲಿ ತಿಳಿದುಬಂದ ಇನ್ನೊಂದು ಪ್ರಮುಖ ಸಂಗತಿ ಏನೆಂದರೆ ಅತಿ ಹೆಚ್ಚಿನ ವಿದ್ಯಾರ್ಥಿನಿಯ ವಸತಿನಿಲಯಕ್ಕೆ ಸೇರ್ಪಡೆಯು ವಿದ್ಯಾಭ್ಯಾಸಕ್ಕಾಗಿಯೇ ಎಂದು ತಿಳಿಯಬಹುದು. ಏಕೆಂದರೆ ಇವರು ಬಹುತೇಕ ದೂರದ ಪ್ರದೇಶದಿಂದ ವಿದ್ಯಾರ್ಥಿಗಳು ಬಂದಿದ್ದಾರೆ. ಅತಿ ಹೆಚ್ಚಿನ ಸಂಖ್ಯೆಯ ವಸತಿನಿಲಯಗಳಲ್ಲಿ ಪ್ರವೇಶ ಪದ್ಧತಿಯು ಜಾತಿಯ ಆಧಾರದ ಮೇಲಿರುವುದು ಕಂಡು ಬಂದಿದೆ. ಆದರೆ ಇಂತಹ ಪ್ರವೇಶ ಪದ್ಧತಿಯು ಸದರಿ ವಿದ್ಯಾರ್ಥಿನಿಯರಿಗೆ ಆರ್ಥಿಕತೆಯ ಕಷ್ಟದ ಪರಿಸ್ಥಿತಿಯನ್ನು ತೋರಿಸುವುದು.

ಅತಿ ಹೆಚ್ಚಿನ ಸಂಖ್ಯೆಯ ವಸತಿನಿಲಯಗಳಲ್ಲಿ ಉಚಿತವಾದ್ದಂತಹ ಪ್ರವೇಶಿಕೆಯನ್ನು ಪಡೆದಿದ್ದಿರೆ ಇದರಿಂದ ಸರ್ಕಾರದ ಸೌಲಭ್ಯಗಳನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳುತ್ತಿದ್ದಾರೆ ಎಂಬುದನ್ನು ತಿಳಿಯಬಹುದಾಗಿದೆ.

ವಸತಿನಿಲಯವು ಸದರಿ ವಿದ್ಯಾರ್ಥಿನಿಯರ ಅಧ್ಯಯನಕ್ಕೆ ಪೂರಕವಾದ ಸೌಲಭ್ಯವನ್ನು ಹೊಂದಿದೆಯೇ ಎಂಬುದರ ಬಗೆಗಿನ ಅಭಿಪ್ರಾಯಗಳನ್ನು ಗಮನಿಸಿದಾಗ ಬಹು ಸಂಖ್ಯಾತ ವಿದ್ಯಾರ್ಥಿನಿಯರು ಪೂರಕವಾದ ಸೌಲಭ್ಯವನ್ನು ಹೊಂದಿರುವುದಿಲ್ಲ.

ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳುತ್ತಾರೆಯೇ ಎಂಬುದರ ಬಗೆಗಿನ ಅಭಿಪ್ರಾಯಗಳನ್ನು ವಿಶ್ಲೇಷಿಸಿದಾಗ ಅತಿ ಹೆಚ್ಚಿನ ಸಂಖ್ಯೆಯ ವಿದ್ಯಾರ್ಥಿನಿಯರು ಶಿಷ್ಯವೇತನವನ್ನು ಪಡೆದುಕೊಳ್ಳಲು ಅರ್ಹರಾಗಿದ್ದಾರೆ ಎಂಬುದು ಕಂಡುಬಂದಿದೆ. ಈ ಅಧ್ಯಯನದಲ್ಲಿ ಕಂಡುಬಂದ ಮತ್ತೊಂದು ಪ್ರಮುಖ ಅಂಶವೆಂದರೆ ಆಧಿಕ ಸಂಖ್ಯೆ ವಿದ್ಯಾರ್ಥಿನಯರು ಶಿಷ್ಯವೇತನವನ್ನು ಪಡೆದುಕೊಳ್ಳುವಾಗ ಕಾಲೇಜಿನ ಸಿಬ್ಬಂದಿ ವರ್ಗದವರು ಮಾಮೂಲಯನ್ನು ತೆಗೆದುಕೊಳ್ಳುತ್ತಾರೆಂದು ಹೇಳಿರುವುದು ಕಂಡುಬಂದಿದೆ. ಬಹುಸಂಖ್ಯೆಯ ವಿದ್ಯಾರ್ಥಿನಿಯರು ಶಿಷ್ಯವೇತನವು ಸರಿಯಾದ ಸಮಯಕ್ಕೆ ದೊರೆಯುವುದಿಲ್ಲವೆಂದು ಹೇಳಿದ್ದಾರೆ. ಇದರಂತೆಯೇ ಬಹಳಷ್ಟು ಜನ ವಿದ್ಯಾರ್ಥಿನಿಯರು ತಮಗೆ ಬರುವ ಶಿಷ್ಯವೇತನದಿಂದ ತಮ್ಮ ಶೈಕಷಣಿಕ ಅಗತ್ಯಗಳನ್ನು ನೆರವೇರಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೆಂದು ಹೇಳಿರುವ ಅಂಶವು ಸದರಿ ಅಧ್ಯಯನದಲ್ಲಿ ತಿಳಿಸಲಾಗಿದೆ.

ವಿದ್ಯಾರ್ಥಿನಿಯರು ತಮಗೆ ಬರುವ ಶಿಷ್ಯ ವೇತನದಿಂದ ತಮ್ಮ ಶೈಕ್ಷಣಿಕ ಅಗತ್ಯವನ್ನು ಈಡೇರಿಸಿಕೊಳ್ಳಲು ಸಾಧ್ಯವಾಗದಿದ್ದಾಗ ಅಗತ್ಯಗಳನ್ನು ಹೇಗೆ ಈಡೇರಿಸಿಕೊಳ್ಳುತ್ತಾರೆ ಎಂಬುದನ್ನು ವಿಶ್ಲೇಷಿಸಿದಾಗ ಅತಿ ಹೆಚ್ಚಿನ ಸಂಖ್ಯೆಯು ವಿದ್ಯಾರ್ಥಿನಿಯರು ತಮ್ಮ ಪಾಲಕರಿಂದ ತಮ್ಮ ಶೈಕ್ಷಣಿಕ ಅಗತ್ಯಗಳನ್ನು ಈಡೇರಿಸಿಕೊಳ್ಳುತ್ತಾರೆಂಬುದು ಗೊತ್ತಾಗಿದೆ.

ಈ ಪ್ರಸ್ತುತ ಅಧ್ಯಯನದಲ್ಲಿ ಪರಿಶಿಷ್ಟಜಾತಿಯ ಮಹಿಳಾ ವಿದ್ಯಾರ್ಥಿನಿಯರ ವೈವಾಹಿಕ ಸಮಸ್ಯೆಯನ್ನು ತಿಳಿಯಲಾಗಿದೆ.

ಈ ಒಂದು ಅಧ್ಯಯನದಲ್ಲಿ ತಿಳಿದುಬಂದ ಇನ್ನೊಂದು ಪ್ರಮುಖ ಸಂಗತಿಯೆಂದರೆ ಬಹು ವಿದ್ಯಾರ್ಥಿಯು ತಮ್ಮ ಜಾತಿಯವರ ವಿವಾಹವನ್ನು ಬಯಸುತ್ತಾರೆ. 1/2ದಷ್ಟು ವಿದ್ಯಾರ್ಥಿಯರು ಅಂತರ್‌ಜಾತಿಯ ವಿವಾಹವನ್ನು ಬಯಸುತ್ತಾರೆ.

ಸಂಶೋಧನಾ ಅಧ್ಯಯನದಲ್ಲಿ ಕಂಡು ಬಂದ ಇನ್ನೊಂದು ಅಂಶವೆಂದರೆ ಬಹುಸಂಖ್ಯಾತ ವಿದ್ಯಾರ್ಥಿನಿಯರು ಅವಿವಾಹಿತರಾಗಿದ್ದಾರೆ. ಕಾರಣ ಅವರು ಶಿಕ್ಷಣಕ್ಕೂ ಹೆಚ್ಚನ ಪ್ರಾಮುಖ್ಯತೆ ನೀಡಿದ್ದಾರೆ. ಕೆಲವು ವಿದ್ಯಾರ್ಥಿನಿಯರು ವಿವಾಹವಾಗಿರುವುದನ್ನು ಕಂಡುಬಂದಿದೆ.

ಅಲ್ಲದೆ ಇನ್ನೊಂದು ಪ್ರಮುಖವಾದ ಅಂಶವೆಂದರೆ ತಮ್ಮ ಸಂಗಾತಿಯಲ್ಲಿ ಇರಬೇಕಾದ ಅರ್ಹತೆ ಶಿಕ್ಷಣಕ್ಕೆ ಉತ್ತಮ ನಡವಳಿಕೆಯ ಬಗ್ಗೆ ಬಹುತೇಕ ವಿದ್ಯಾರ್ಥಿಯು ಒಪ್ಪಿಗೆಯನ್ನು ಸೂಚಿಸಿದ್ದಾರೆ.

ಬಹುತೇಕ ವಿದ್ಯಾರ್ಥಿನಿಯರು ಸಂಪ್ರದಾಯಕ ವಿವಾಹಕ್ಕೆ ಹೆಚ್ಚಿನ ಮಹತ್ವ ನೀಡಿದ್ದಾರೆ. ಇದರಿಂದ ತಿಳಿಯುವುದೇನೆಂದರೆ ಇವರಲ್ಲಿ ಸಾಮಾಜಿಕ ಚಲನೆಯು ಅತ್ಯಂತ ಕಡಿಮೆ ಇದೆ ಎಂದು ತಿಳಿಯುವುದು. ಅಲ್ಲದೆ ವಿದ್ಯಾರ್ಥಿನಿಯರ ಮದುವೆಯಲ್ಲಿ ಪ್ರಮುಖವಾಗಿ ಪಾತ್ರ ವಹಿಸುತ್ತಾರೆ. ಏಕೆಂದರೆ ತಂದೆ ತಾಯಿಯವರೇ ಆಗಿದ್ದಾರೆ. ಇದರಿಂದ ತಿಳಿದು ಬರುವುದೇನೆಂದರೆ ಇವರಲ್ಲಿ ಸಾಮಾಜಿಕ ಪರಿವರ್ತನೆ ಅತ್ಯಂತ ಕಡಿಮೆಮಟ್ಟದಲ್ಲಿದೆ.

ಇನ್ನೊಂದು ಪ್ರಮುಖವಾದ ಅಂಶವೆಂದರೆ ವರದಕ್ಷಿಣೆ ಸಮಸ್ಯೆ ವಿವಾಹದಲ್ಲಿ ಹೆಚ್ಚಿನ ಸ್ತ್ರೀಯರು ವರದಕ್ಷಿಣೆ ಸಮಸ್ಯೆಯನ್ನು ಅನುಭವಿಸಿದ್ದಾರೆ. ಇದರಿಂದ ವರದಕ್ಷಿಣೆ ಸಮಸ್ಯೆಯು ಇನ್ನೂ ಭಾರತದಲ್ಲಿದೆ ಎಂದು ತಿಳಿದು ಬರುತ್ತದೆ.

ಅಲ್ಲದೆ ನಮ್ಮ ಅಧ್ಯಯನದಲ್ಲಿ ವಿವಾಹ ವಿಚ್ಛೇಧನ, ಲೈಂಗಿಕ ಕಿರುಕುಳ ಮುಂತಾದವು ಯಾವುದು ಕಂಡುಬಂದಿಲ್ಲ ಎಂದು ಹೇಳಬಹುದಾಗಿದೆ.

ಪರಿಶಿಷ್ಟ ಜಾತಿ ವಿದ್ಯಾರ್ಥಿನಿಯರು ಅನೇಕ ಸಮಸ್ಯೆಗಳಿಂದ ಕೂಡಿದವರಾಗಿದ್ದಾರೆ. ಶಿಕ್ಷಣಕ್ಕಾಗಿ ಇವರಿಗೆ ಅನೇಕ ಸಮಸ್ಯೆಗಳಿದ್ದರೂ ಇವುಗಳನ್ನು ಮೀರಿ ಸರ್ಕಾರ ನೀಡುತ್ತಿರುವ ಸೌಲಭ್ಯಗಳನ್ನು ಪಡೆದುಕೊಂಡು ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಶೈಕ್ಷಣಿಕವಾಗಿ ಮುಂದುವರಿಯುತ್ತಿದ್ದರೂ ಜಾತಿ ಸಮಸ್ಯೆ ಇಂದಿಗೂ ಕಂಡುಬಂದಿದೆ.

ಪರಿಶಿಷ್ಟ ಜಾತಿಯ ಜನರ ಸರ್ವತೋಮುಖ ಅಭಿವೃದ್ಧಿಯಾಗಬೇಕಾದರೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಕೈಗೊಳ್ಳುವ ಕ್ರಮಗಳಿಂದ ಮಾತ್ರ ಸಾಧ್ಯವಾಗಲಾರದು. ಇವೆಲ್ಲವುಗಳ ಜೊತೆಗೆ ಮುಖ್ಯವಾಗಿ ಸಾರ್ವಜನಿಕರಲ್ಲಿ ಸಾಮಾಜಿಕ ಜಾಗೃತಿಯಾಗಬೇಕು. ಹಾಗೂ ಸರ್ಕಾರ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಿಗೆ ಕೊಡುವ ಸಹಾಯ ಸೌಲಭ್ಯಗಳನ್ನು ಸದರಿ ವಿದ್ಯಾರ್ಥಿನಿಯರು ಸರಿಯಾಗಿ ಸದುಪಯೋಗ ಮಾಡಿಕೊಂಡು ಸಮಾಜದಲ್ಲಿ ಒಳ್ಳೆಯ ಸುಸಂಸ್ಕೃತ ಹಾಗೂ ಗಣ್ಯ ವ್ಯಕ್ತಿಗಳಾಗಲು ಪ್ರಯತ್ನಿಸಬೇಕು. ಅಂದಾಗ ಮಾತ್ರ ಪರಿಶಿಷ್ಟ ಜಾತಿಯಜನರು ಸಮಾಜದಲ್ಲಿ ಗೌರವಯುತವಾಗಿ ಬದುಕಲು ಸಾಧ್ಯ.

## 5.1 ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನವು ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರನ್ನು ಕುರಿತ ಅಧ್ಯಯನವಾಗಿದೆ. ಇದರಿಂದ ನಮಗೆ ದೊರೆತಿರುವ ಫಲಿತಗಳು ಈ ಕೆಳಗಿನಂತಿವೆ.

- ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರಲ್ಲಿ ಇರುವ ಸಮಸ್ಯೆಗಳೆಂದರೆ ಸಾಮಾಜಿಕ ಸಮಸ್ಯೆ, ಶೈಕ್ಷಣಿಕ ಸಮಸ್ಯೆ, ಆರ್ಥಿಕ ಸಮಸ್ಯೆ, ವೈವಾಹಿಕ ಸಮಸ್ಯೆ ಮುಂತಾದವುಗಳು.
- ಪ್ರಸ್ತುತ ಸಮಾಜದಲ್ಲಿ ಅಥವಾ ವಿಶ್ವವಿದ್ಯಾಲಯದಲ್ಲಿ ಜಾತಿ ಸಮಸ್ಯೆ, ಲಿಂಗತಾರತಮ್ಯತೆ, ಲೈಂಗಿಕ ಕಿರುಕುಳ ಇರುವುದು ಕಂಡುಬಂದಿದೆ.
- ಶೈಕ್ಷಣಿಕ ಸಮಸ್ಯೆಗಳಲ್ಲಿ ಭಾಷಾ ಸಮಸ್ಯೆ, ಗ್ರಂಥಾಲಯದ ಸಮಸ್ಯೆ, ಆರ್ಥಿಕ ಸಮಸ್ಯೆ ಇತರೆ ಸಮಸ್ಯೆಗಳು ಕಂಡುಬಂದಿವೆ.
- ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಕುಟುಂಬದ ಪರಿಸ್ಥಿತಿಯು ಬಡತನದಿಂದ ಮತ್ತು ಅವರ ತಂದೆ-ತಾಯಿಗಳು ಹೆಚ್ಚಾಗಿ ಅನಕ್ಷರಸ್ಥರಾಗಿದ್ದಾರೆ ಎಂದು ತಿಳಿಯುತ್ತದೆ.
- ವಸತಿ ನಿಲಯಗಳಲ್ಲಿ ಬೇರೆ ಬೇರೆ ಜಾತಿಯ ವಿದ್ಯಾರ್ಥಿನಿಯರಿಂದ ಜಾತಿಯತೆಯ ಸಮಸ್ಯೆ ಇದೆ ಎಂದು ತಿಳಿಯಲಾಗಿದೆ.
- ಸರ್ಕಾರಿ ಸೌಲಭ್ಯಗಳು ಸರಿಯಾದ ಸಮಯಕ್ಕೆ ದೊರೆಯುವುದಿಲ್ಲ ಮತ್ತು ಲಂಚ ಪಡೆಯುತ್ತಾರೆ ಎಂದು ತಿಳಿದಿದೆ.
- ಪ್ರಸ್ತುತ ಸಮಾಜದಲ್ಲಿ ಅಂತರ್ ಜಾತಿಯ ವಿವಾಹವಾಗಲು ವಿದ್ಯಾರ್ಥಿನಿಯರು ಸಿದ್ಧವಿರುವುದು ಕಂಡುಬಂದಿದೆ.
- ಪ್ರಸ್ತುತವಾಗಿ ವರದಕ್ಷಿಣೆ ಸಮಸ್ಯೆ ಇದೆ ತಿಳಿದು ಬಂದಿದೆ.
- ವಿವಾಹ ವಿಚ್ಛೇಧನ, ಬಾಲ್ಯವಿವಾಹಗಳು ಇಂತಹ ಸಮಸ್ಯೆಗಳು ಇಲ್ಲ ಎಂದು ತಿಳಿದಿದೆ. ಮತ್ತು ಇವರ ಸಮಸ್ಯೆಗಳನ್ನು ಅರಿಯಲು ಸಹಾಯಕವಾಗಿದೆ.

## 5.2 ಸಮಸ್ಯೆಯಿಂದ ಹೊರಬರಲು ಸಲಹೆಗಳು

'ಉನ್ನತ ಶಿಕ್ಷಣದಲ್ಲಿ ಪರಿಶಿಷ್ಟಜಾತಿಯ ವಿದ್ಯಾರ್ಥಿನಿಯರು : ಒಂದು ಅಧ್ಯಯನ' ಮಾಡಿದ್ದರಿಂದ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಮಸ್ಯೆಗಳನ್ನು ಗುರುತಿಸಲಾಗಿದೆ. ಈ ಸಮಸ್ಯೆಗಳಿಂದ ಹೊರಬರಲು ಕೆಲವು ಸಲಹೆಗಳನ್ನು ನೀಡಲಾಗಿದೆ. ಅವುಗಳು ಈ ಕೆಳಗಿನಂತಿವೆ.

- ಸರ್ಕಾರ ತಿಳಿಸುತ್ತಿರುವ ಸೌಲಭ್ಯಗಳನ್ನು ಪಡೆದುಕೊಂಡು ಉತ್ತಮ ಶಿಕ್ಷಣ ಪಡೆಯುವುದು.
- ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಎಲ್ಲಾ ಅನುಕೂಲಗಳನ್ನು ಪಡೆಯಬಹುದು.
- ಸಮಾಜದಲ್ಲಿ ಸಾಮಾಜಿಕ ಜಾಗೃತಿ ಮೂಡಿಸಬಹುದು.
- ಸರ್ಕಾರದಿಂದ ವಿವಿಧ ಸೌಲಭ್ಯಗಳನ್ನು ಸದುಪಯೋಗದ ಪಡಿಸಿಕೊಂಡು ಮುಂದುವರಿಯುವುದು.
- ತಾವು ಬಡವರು, ತಾವು ಕೀಳು ಜನಾಂಗದವರು ಎಂಬ ಭಾವನೆಯನ್ನು ತೊರೆಯಬೇಕು
- ಇವರು ಸ್ವ ಸಾಮರ್ಥ್ಯದಿಂದ ಬದುಕುವ ವಿಧಾನವನ್ನು ಕಲಿಯಬೇಕು
- ಉನ್ನತ ಹುದ್ದೆಗಳಾದ ಐ.ಎ.ಎಸ್. ಐ.ಪಿ.ಎಸ್. ಐ.ಎಫ್.ಎಸ್. ಕೆ.ಎ.ಎಸ್. ಇಂತಹ ಹುದ್ದೆಗಳಿಗೆ ಹೋದಾಗ ಸಮಸ್ಯೆ ಬಗೆಹರಿಸಬಹುದು.
- ಇವರು ಮೂಢನಂಬಿಕೆ - ಆಚಾರ-ವಿಚಾರ ಬಿಟ್ಟು ವೈಜ್ಞಾನಿಕ ಜ್ಞಾನ ಬೆಳೆಸಿಕೊಳ್ಳುವುದು.
- ಚಿಂತನಾ ಮತ್ತು ಆಲೋಚನೆಗಳನ್ನು ಮಾಡುವಂತಹ ಮನೋಭಾವನೆಯನ್ನು ಬೆಳೆಸಿಕೊಳ್ಳಬೇಕು.
- ಶಿಕ್ಷಣ ಪಡೆಯುವುದರಿಂದ ಯಾವ ಸಮಸ್ಯೆಗಳನ್ನಾದರೂ ಬಗೆಹರಿಸಿಕೊಳ್ಳಬಹುದು ಎಂದು ಅವರು ತಿಳಿಯಬೇಕು

## 5.3 ಮುಂದಿನ ಅಧ್ಯಯನಕ್ಕೆ ಸಾಧ್ಯತೆಗಳು

ಪ್ರಸ್ತುತ ಅಧ್ಯಯನವು ಬೆಂಗಳೂರು ಜ್ಞಾನಭಾರತಿ ಆವರಣದಲ್ಲಿನ ಉನ್ನತ ಶಿಕ್ಷಣದಲ್ಲಿನ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಕುರಿತ ಅಧ್ಯಯನವಾಗಿದೆ. ನಾನು ಒಂದು ಕಾಲಮಿತಿಯಲ್ಲಿ ಅದರಲ್ಲೂ ಒಂದು ವಿಶ್ವವಿದ್ಯಾಲಯದ ಅಧ್ಯಯನದಿಂದ ಹಲವಾರು ಸಮಸ್ಯೆಗಳನ್ನು ತಿಳಿದುಕೊಂಡಿದ್ದೇನೆ.. ನಂತರದ ಸಂಶೋಧಕರು ಹೆಚ್ಚಿನ ಅವಧಿಯಲ್ಲಿ ಅಂದರೆ ಒಂದು ಸಿಮೀತ ವಲಯಕ್ಕೆ ಮೀಸಲಾಗದೆ ಅವರು ಕರ್ನಾಟಕದ ಎಲ್ಲಾ ವಿಶ್ವವಿದ್ಯಾಲಯಗಳು ಅಂದರೆ ಹಿಂದುಳಿದ ಭಾಗಗಳಲ್ಲಿರುವ ಹೈದರಾಬಾದ್ ಕರ್ನಾಟಕ ಮತ್ತು ಗುಲ್ಬರ್ಗ ವಿಶ್ವವಿದ್ಯಾಲಯದ ವಿದ್ಯಾರ್ಥಿನಿಯರ ಸಮಸ್ಯೆಗಳು ಬೇರೆಯಾಗಿರುತ್ತವೆ. ಬೆಂಗಳೂರು ವಿಶ್ವವಿದ್ಯಾಲಯದ ವಿದ್ಯಾರ್ಥಿನಿಯರ ಸಮಸ್ಯೆಗಳು

ಬೇರೆ ಬೇರೆಯಾಗಿರುತ್ತವೆ. ಆದ್ದರಿಂದ ಬೆಳಗಾಂ ಜಿಲ್ಲೆಯಲ್ಲಿ ಜಮೀನ್ದಾರಿ ಪದ್ಧತಿ ಇರುವುದರಿಂದ ಈ ಪ್ರದೇಶದ ವಿದ್ಯಾರ್ಥಿನಿಯರ ಸಮಸ್ಯೆಗಳು ಬೇರೆಯಾಗಿರುತ್ತವೆ. ಆದ್ದರಿಂದ ಮುಂದಿನ ಅಧ್ಯಯನಕಾರರು ಕರ್ನಾಟಕದ ಎಲ್ಲಾ ವಿಶ್ವವಿದ್ಯಾಲಯಗಳ ಪರಿಶಿಷ್ಟ ಜಾತಿಯ ವಿದ್ಯಾರ್ಥಿನಿಯರ ಸಮಸ್ಯೆಗಳನ್ನು ಸರಿಯಾಗಿ ಗುರುತಿಸಿದಾಗ ಅವಕ್ಕೆ ಸರಿಯಾದ ಮತ್ತು ಎಲ್ಲರಿಗೂ ನ್ಯಾಯಬದ್ಧವಾದ ಹಕ್ಕುಗಳು ಮತ್ತು ಪರಿಹಾರಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ ಎಂದು ತಿಳಿಯಲಾಗಿದೆ.

ಅನುಬಂಧ

# ಗ್ರಂಥಋಣ


1. G.S. Ghurye : Caste and Race in India (1979) Popular Prakashan Pvt. Ltd., Bombay
2. Giridhar Gomango : Constitutional Provisions for the Scheduled caste and Scheduled Tribes, 1992. Himalaya Publishing House, Bombay.
3. Jyothimitra : Womens and Society, Kanishka Publishers, New Delhi
4. Kumud Ranjan : Women and Modern Occupation in India, 1993, Chcuch Publication, Allahabad
5. Mathur Y.B. : Women's Education in India, 1973, Asia Publishing House, Bombay
6. Mujibul Hasan Siddque : Women Education, 1993, Ashish Publishing House, New Delhi.
7. Mukerji S.M. : Education in India, 1969
8. Mumtaz Alikhan : Scheduled Caste and their status, 1980, Uppal Publishing House, New Delhi.
9. Mala : Poverty of Intellualism in India, 1978, Universityof Mysore.
10. Ram Sharam. s : Education of Women o f Scheduled Caste and Scheduled Tribes. 1996, Discovery Publishing House, New Delhoi
11. Satija. B.R : Trends in Education, 1996, ANN Mol Publication, New Delhi
12. Sachchidananda : Structural Constrainsin the Education of Scheduled Tribes and Scheduled Caste, 1982. Inter India Publication, New Delhi
13. Venkata Subbaiah.R. : Higher Education Scheduled Caste and Tribe, 1993
14. Viswanadhan.G & Narasimha Reddy : Scheduled Cates : A Study in Achievement, 1995, Scientific Series, Educational, Hyderabad.

University News

15. ಅನ್ನಪೂರ್ಣೇಶ್ವರಿ. ಎನ್. : ಮಹಿಳಾ ಶಿಕ್ಷಣ ಮತ್ತು ಅಭಿವೃದ್ಧಿ
ಮಾನವ ಅಭಿವೃದ್ಧಿ ಕೇಂದ್ರ, ಮೈಸೂರು. 2002.

16. ಭಾರತದ ದೇಶಕೋಶ, (1978) : ಕನ್ನಡ ಸಂಸ್ಕೃತಿ ನಿರ್ದೇಶನಾಲಯ' ಬೆಂಗಳೂರು

17. ಚಾಂಡಾಳ, : 'ಕರ್ನಾಟಕ ದಲಿತ ಚಳುವಳಿ ಮತ್ತು ಅಂಬೇಡ್ಕರ್'
(1997), ಚೈತ್ರ ಪ್ರಕಾಶನ, ಕೋಲಾರ

18. ಡಾ. ಆರ್. ಇಂದಿರಾ : ಮಹಿಳೆ ಸಮಾಜ ಮತ್ತು ಸಂಸ್ಕೃತಿ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ , 2002.

19. ಜವರಯ್ಯ. ಮ.ನಾ ; 'ಅಂಬೇಡ್ಕರ್ ಮತ್ತು ಸಾಮಾಜಿಕ ನ್ಯಾಯ' (1995)
ಸಿದ್ಧಾರ್ಥ ಪ್ರಕಾಶಕರು, ಮೈಸೂರು

20. ಡಾ. ಜ್ಯೋತಿ ಶಶಿಕುಮಾರ್ : ಮಹಿಳಾ ಸಮಾಜಿಕತೆ, ಮಹಿಳಾ ಅಧ್ಯಯನಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ. 2007.

21. ಡಾ. ಜೋತ್ಸ್ನಾ ಕಾಮತ್ : ಮಹಿಳೆ ಒಂದು ಅಧ್ಯಯನ,
ನವಕರ್ನಾಟಕ, ಬೆಂಗಳೂರು, 1999.

22. ಎಂ. ನಾರಾಯಣ : ಸಾಮಾಜಿಕ ಸಂಸ್ಥೆಗಳು, ಸಾಮಾಜಿಕ ಬದಲಾವಣೆ
ಚೇತನ್ ಬುಕ್‌ಹೌಸ್, ಮೈಸೂರು. 2004.

22. ಶಂಕರರಾವ್. ಚ.ನ. : 'ಭಾರತೀಯ ಸಮಾಜದ ಅಧ್ಯಯನ' (1996),
ಜೈಭಾರತ್ ಪ್ರಕಾಶನ, ಮಂಗಳೂರು

23. ಶಾರದಾ ಶಾಮಣ್ಣ : ಭಾರತೀಯ ಮಹಿಳೆ
ಕಳಸ ಪ್ರಕಾಶನ, ಬೆಂಗಳೂರು, 1991.

24. ಕರ್ನಾಟಕ ಗ್ಯಾಸೆಟೆಯರ್, 1986

**ಪತ್ರಿಕೆಗಳು**

1. ಪ್ರಜಾವಾಣಿ
   ಕನ್ನಡಪ್ರಭ
   ಸಂಯುಕ್ತ ಕರ್ನಾಟಕ

# ಸಂದರ್ಶನ ಪಟ್ಟಿ

## ಸಂದರ್ಶಿತರ ಹಿನ್ನೆಲೆ

1. ಹೆಸರು :
2. ವಯಸ್ಸು :
3. ವಿಳಾಸ :
4. ಜಾತಿ :
5. ಧರ್ಮ :
6. ಪದವಿ :
7. ವಿಭಾಗ :

## ಕೌಟುಂಬಿಕ ಹಿನ್ನೆಲೆ

| ಕ್ರ.ಸಂ. | ಹೆಸರು | ವ್ಯಕ್ತಿಗೆ ಸಂಬಂಧ | ಲಿಂಗ | ವಯಸ್ಸು | ವೈವಾಹಿಕ ಸ್ಥಾನ | ಶಿಕ್ಷಣ | ಉದ್ಯೋಗ | ಆದಾಯ | ಆಸ್ತಿ |
|---|---|---|---|---|---|---|---|---|---|
| 1 | | | | | | | | | |
| 2 | | | | | | | | | |
| 3 | | | | | | | | | |
| 4 | | | | | | | | | |
| 5 | | | | | | | | | |

1. ಆರಂಭದ ವಿದ್ಯಾಭ್ಯಾಸವನ್ನು ಯಾವ ಊರಿನಲ್ಲಿ ಮುಗಿಸಿದ್ದೀರಿ ?
   ಹಳ್ಳಿ/ತಾಲ್ಲೂಕು/ಜಿಲ್ಲೆ
2. ನೀವು ವಿದ್ಯಾಭ್ಯಾಸವನ್ನು ಯಾವ ಶಾಲಾ ಕಾಲೇಜಿನಲ್ಲಿ ಮುಗಿಸಿದ್ದೀರಿ ?
   ಸರ್ಕಾರಿ/ಖಾಸಗಿ
3. ನಿಮ್ಮ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ನೀಡಿದವರಾರು ?
4. ಉನ್ನತ ಶಿಕ್ಷಣವನ್ನು ಪಡೆಯಲು ಇಚ್ಛಿಸುತ್ತೀರಾ ? ಏಕೆ?

5. ನೀವು ಉನ್ನತ ಶಿಕ್ಷಣಕ್ಕೆ ಯಾವ ವಿಷಯವನ್ನು ಆಯ್ಕೆ ಮಾಡಿಕೊಂಡಿದ್ದೀರಾ? ಏಕೆ
ಕಲೆ/ವಾಣಿಜ್ಯ/ವಿಜ್ಞಾನ

6. ಉನ್ನತ ಶಿಕ್ಷಣಕ್ಕಾಗಿ ಈ ವಿಶ್ವವಿದ್ಯಾಲಯವನ್ನು ಯಾವ ಕಾರಣಕ್ಕಾಗಿ ಆಯ್ಕೆ ಮಾಡಿಕೊಂಡಿದ್ದೀರಾ ?

7. ನೀವು ಈ ವಿಶ್ವವಿದ್ಯಾಲಯದಿಂದ ಅಪೇಕ್ಷಿಸಿದನ್ನೇ ಪಡೆಯಲು ಸಾಧ್ಯವಾಗಿದೆಯೇ ?

8. ನೀವು ವಿದ್ಯಾರ್ಥಿನಿ ನಿಲಯದಲ್ಲಿರುವವರೇ ?
ಹೌದು /ಅಲ್ಲ

9. ವಿದ್ಯಾರ್ಥಿನಿಯರಲ್ಲಿ ನಿಮ್ಮ ವಿದ್ಯಾಭ್ಯಾಸಕ್ಕೆ ಬೇಕಾಗಿರುವಂತಹ ಸೌಲಭ್ಯವಿದೆಯೇ ?
ಹೌದು/ಇಲ್ಲ

10. ನಿಮ್ಮ ವಿದ್ಯಾಭ್ಯಾಸದ ಆರಂಭದ ದಿನಗಳಿಂದಲೂ ವಿದ್ಯಾರ್ಥಿ ವೇತನ ಮಂಜೂರಾಗಿದೆಯೇ?

11. ಉನ್ನತ ಶಿಕ್ಷಣ ಪಡೆಯುತ್ತಿರುವಂತಹ ಸಮಯದಲ್ಲಿ ಯಾವ ಯಾವ ಸಂಸ್ಥೆಗಳಿಂದ ವಿದ್ಯಾರ್ಥಿವೇತನ ಮಂಜೂರಾಗುತ್ತಿದೆ?

12. ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಮಾಡುವಾಗ ಕಂಡುಬರುವ ಸಮಸ್ಯೆಗಳನ್ನು ತಿಳಿಸಿಕೊಡಿ.
ಭಾಷಾ ಸಮಸ್ಯೆ/ಶಿಕ್ಷಕರ ಸಮಸ್ಯೆ/ಗ್ರಂಥಾಲಯದ ಸಮಸ್ಯೆ/ಇತರೆ

13. ನೀವು ಉನ್ನತ ಶಿಕ್ಷಣ ಪಡೆದ ನಂತರ ಯಾವ ಉದ್ಯೋಗವನ್ನು ಇಚ್ಚಿಸುತ್ತೀರಾ ?

14. ಉನ್ನತ ಶಿಕ್ಷಣದಿಂದ ನಿಮ್ಮ ಕುಟುಂಬಕ್ಕೆ ಅನುಕೂಲವಾಗಿದೆಯೇ ?

15. ನೀವು ವಿಶ್ವವಿದ್ಯಾಲಯದ ಶಿಕ್ಷಣದ ಬಗ್ಗೆ ಇತರರಿಗೆ ಮಾರ್ಗದರ್ಶನ ನೀಡುವಿರ ?

16. ನಿಮ್ಮ ಅಭಿಪ್ರಾಯದಲ್ಲಿ ಸ್ತ್ರೀಯರಿಗೆ ಉನ್ನತ ಶಿಕ್ಷಣದ ಅವಶ್ಯಕತೆಯಿದೆಯೇ ?

17. ನೀವು ಸ್ತ್ರೀಯರಾಗಿ ಯಾವ ವಿಷಯಗಳ ಬಗ್ಗೆ ಹೆಚ್ಚು ಒತ್ತು ಕೊಡಲು ಬಯಸುತ್ತೀರಾ?
ಶಿಕ್ಷಣ/ಉದ್ಯೋಗ/ವಿವಾಹ/ಎಲ್ಲವುಗಳನ್ನು

18. ವಿವಾಹದ ಬಗ್ಗೆ ನಿಮ್ಮ ಅಭಿಪ್ರಾಯವೇನು ತಿಳಿಸಿ

19. ನೀವು ಯಾವ ರೀತಿ ವಿವಾಹವಾಗಲು ಬಯಸುತ್ತೀರ ?
ಸರಳ ವಿವಾಹ/ಅಂತರ್ ಜಾತಿ/ಉನ್ನತ ವರ್ಗ/ಮಧ್ಯಮ ವರ್ಗ

20 ನೀವು ಕ್ಯಾಂಪಸ್‌ನಲ್ಲಿ ಜಾತಿ ಬೇಧದ ಸಮಸ್ಯೆಯನ್ನು ಎದುರಿಸಿದ್ದೀರಾ ?
ಹೌದು/ಇಲ್ಲ

21 ನೀವು ಲಿಂಗ ತಾರತಮ್ಯತೆ ಸಮಸ್ಯೆ ಎದುರಿಸಿದ್ದೀರಾ ?
ಹೌದು/ಇಲ್ಲ

22 ನೀವು ಲೈಂಗಿಕ ಕಿರುಕುಳ ಸಮಸ್ಯೆ ಎದುರಿಸಿದ್ದೀರಾ ?
ಹೌದು/ಇಲ್ಲ

23 ವಿದ್ಯಾರ್ಥಿ ಪ್ರತಿಭಟನೆಯಲ್ಲಿ ಭಾಗವಹಿಸಿದ್ದೀರಾ ? ಹೌದು/ಇಲ್ಲ

24 ಉನ್ನತ ಶಿಕ್ಷಣ ಪಡೆಯಲು ಕಾರಣವೇನು ? ಉದ್ಯೋಗ - ವಿವಾಹ-ಇತರೆ ಕಾರಣ

25 ನೀವು ಉದ್ಯೋಗವನ್ನು ಇಷ್ಟಪಡುತ್ತೀರಾ ?
ಹೌದು/ಇಲ್ಲ

26 ಶಿಕ್ಷಣದಿಂದ ಬದಲಾವಣೆ ಇದೆಯಾ ?
ಹೌದು/ಇಲ್ಲ

27 ನಿಮ್ಮ ತಂದೆಯ ವೃತ್ತಿ ಏನು ?

28 ತಾಯಿ ವೃತ್ತಿ ಏನು ?

29 ನಿಮ್ಮ ಸಹೋದರ- ಸಹೋದರಿಯರ ಶೈಕ್ಷಣಿಕ ಹಿನ್ನಲೆ ಏನು ?

30 ನಿಮ್ಮ ತಂದೆಯ ಆಸ್ತಿ ಎಷ್ಟು ಇದೆ ?

31 ನೀವು ಎದುರಿಸುತ್ತಿರುವ ಸಸ್ಯೆಗಳೇನು ?
ಲಿಂಗ ತಾರತಮ್ಯತೆ , ಜಾತೀಯತೆ

32 ಸಮಸ್ಯೆಗಳಿಂದ ಹೊರಬಂದ ರೀತಿ ಯಾವುದು ?

33 ವಸತಿ ನಿಲಯಕ್ಕೆ ಏಕೆ ಬಂದಿರಿ ?

34 ವಸತಿ ನಿಲಯದಲ್ಲಿ ಪ್ರವೇಶ ಪಡೆದ ಕ್ರಮ ಯಾವುದು ?

35 ಜಾತಿ ಆಧಾರ/ ಮೆರಿಟ್ ಆಧಾರ

35 ವಸತಿ ನಿಲಯದಲ್ಲಿ ಪ್ರವೇಶ ಉಚಿತವಾಗಿದೆಯಾ ?
ಹೌದು/ಇಲ್ಲ

36 ಸಿಬ್ಬಂದಿಯವರು ಮಾಮೂಲಿಯನ್ನು ಕೇಳುತ್ತಾರೆಯೇ ?
ಹೌದು/ಇಲ್ಲ

37 ನೀವು ಬಯಸುವ ಹುಡುಗನಲ್ಲಿ ಯಾವ ಗುಣಗಳಿರಬಹುದು ?

ವಿದ್ಯಾವಂತ/ರೂಪವಂತ/ ಹಣವಂತ

38 ನೀವು ಯಾವ ತೆರನಾದ ವಿವಾಹ ಬಯಸುತ್ತೀರಾ ?

ಪ್ರೇಮವಿವಾಹ/ ಸಂಪ್ರದಾಯವಿವಾಹ/ನೋಂದಣಿ

39 ನೀವು ಅಂತರ್‌ಜಾತಿಯ ವಿವಾಹ ಮಾಡಿಕೊಳ್ಳುತ್ತೀರಾ ?

ಹೌದು/ಇಲ್ಲ

40 ನಿಮ್ಮ ವಿವಾಹದಲ್ಲಿ ಹೆಚ್ಚು ಪಾತ್ರ ವಹಿಸುವವರು ಯಾರು ?

ತಂದೆ-ತಾಯಿ/ಸಹೋದರ-ಸಹೋದರಿ/ ಸಂಬಂಧಿಕರು/ ಸ್ನೇಹಿತರು

41 ನೀವು ವರದಕ್ಷಿಣೆ ಸಮಸ್ಯೆ ಅನುಭವಿಸಿದ್ದೀರಾ ?

ಹೌದು/ಇಲ್ಲ

42 ನೀವು ಪರಿಶಿಷ್ಟ ಜಾತಿ ಆಗಿರುವುದಕ್ಕೆ ನಿಮ್ಮ ಅಭಿಪ್ರಾಯವೇನು ?

# ಕೋಷ್ಟಕಗಳ ಪಟ್ಟಿ

